॥ ಜಯಗುರು ಶಂಕರಭಗವನ್ ॥

ನಿತ್ಯನಿರತಿಶಯಾನಂದವನ್ನುಂಟುಮಾಡುವ
ಪರಮಾತ್ಮನ ಸ್ವರೂಪವನ್ನು ತೋರಿಸುವ



# ಶಂಕರಾನಂದ ತತ್ವ

ಈ ವೇದಾಂತ ಗ್ರಂಥಕರ್ತರು

...ಮ ವೇದಾಂತ ಶಿವರಾಮಶಾಸ್ತ್ರಿಗಳೆಂಬ
ಶಂಕರದಾಸರು



ಪ್ರಕಾಶಕರು
... ಗೋಪಾಲಶೆಟ್ಟಿ ಸನ್ಸ್
ಶ್ರೀ ಶಂಕರಾನಂದ ಬುಕ್ ಡಿಪೊ
"ಶಾಂತಿನಿವಾಸ್"
೭ನೆ ಕ್ರಾಸ್ ಹೊಸಕೇರಿ ಮೈಸೂರು ೪

 ಬೆಲೆ: ರೂ. 1-50

ಎಂ. ವಿ. ಸೀತಾರಾಮಶಾಸ್ತ್ರಿ
8/9/78.

॥ ಶ್ರೀ ಜಯಗುರುಶಂಕರ ಭಗರ್ವ ॥

# ಶಂಕರಾನಂದ ತತ್ವ

೧

ಶ್ರೀಗುರುವಚನಸುಧಾರಸವನು ಸವಿ । ದಾಗಳುಹುದು ನರರಿಗೆ ಮುಕುತಿ ॥ ಭೋಗಭೋಗಾಭಿಯೋಗವನೀಗಿ ಶಿವಜೀವ । ಯೋಗಾನುರಾಗ ತತ್ಪರಚಿತ್ತನಾಗಿ ॥ ತೊರೆದು ವಿಷಯುವ । ನಿರ್ವಿಷಯಾಂಕುರವನು । ಸುಸ್ಥಿರ ಮತಿಯೆಂಬ ಸುಕ್ಷೇತ್ರದೊಳು । ಕರಿಗೊಂಡು ನಿಲಸಿ । ಸಜ್ಜನಸಂಘವೆಂಬ ಪುಷ್ಕರವೆರದಭಿ । ವೃದ್ಧಿಗೊಳಿಸೆಂದು ಪೇಳುವ ॥ ಶ್ರೀಗುರು ॥ ೧ ॥ ನಿರಹಂತೆ ಯೆಂಬಪಾತಿಯಕಟ್ಟಿ ಮರವೆಯೆಂ । ಬುರುಕಂಟಕವನೆಲ್ಲ ನೆರಶೋಧಿಸಿ ॥ ಅರರ್ಗವೆಂಬ ಬಾಧಕ ಕೀಟಕವ ಕೊಂದು। ಗುರುಭಕ್ತಿಯೆಂಬಭಿವೃತಿಗಟ್ಟಿ ಪೊರೆ ಯೆಂಬ ॥ ೨ ॥ ಭೇದವಾದಗಳೆಂಬ ಚೋರರ ನಿಜತತ್ವ । ಬೋಧೆಯೆಂಬುರು ಖಡ್ಗದೊಳು ತರಿದು ॥ ಸಾಧಿಸಿ ಮುಕ್ತಿಯೆಂಬುವ ಫಲವನು ಸವಿದ । ನಾದಿ ಶ್ರೀಗುರುಶಂಕರನ ಕೂಡೆಂದುಸುರುವ ॥ ೩ ॥

೨

ವಂದಿಪೆ ನಿಮಗೆ ಗುರುನಾಥ । ಮೊದಲೊಂದಿಪೆ ನಿಮಗೆ ಗುರುನಾಥ । ಹಿಂದುಮುಂದರಿಯದ ನಿಮ್ಮ । ಕಂದನಾದ ಯನ್ನ ನಿತ್ಯಾ । ನಂದದಲಿ ಸೇರಿಸು ಗುರುನಾಥ ॥ಪ॥ ಈಶ ನಿಮ್ಮ ದಾಸರಿಗೆ। ದಾಸನಾದೆ ಯನ್ನಭವ । ಪಾಶವನ್ನು ಹರಿಸೋ ಗುರುನಾಥ ॥ ಮೊ ॥ ೧ ॥ ಭೇದವಾದವಾದಿಗಳ । ಹಾದಿಯನ್ನು ಬಿಡಿಸಿ ನಿಮ್ಮ । ಪಾದವನ್ನು ಪಾಲಿಸೋ ಗುರುನಾಥ ॥ಮೊ॥೨ ॥ ಲೀಲೆಯಿಂದ ನಿನ್ನ ಪಾದ । ಧೂಳಿಯನ್ನ ಶಿರದಮೇಲೆ ಬೀಳುವಂತೆ ಮಾಡೋ ನೀ ಗುರುನಾಥ ॥ ಮೊ ॥ ೩ ॥ ಅಲ್ಲಿಯಿಲ್ಲಿಯಿರುವ ದೇವ । ರೆಲ್ಲ ಬಂದು ನಿನ್ನ ಪಾದ । ದಲ್ಲೆ ನಿಂತರಲ್ಲೊ ಗುರುನಾಥ ॥ ೪ ॥ ಗುರುವೆ ನಿಮ್ಮ ಚರಣದಲ್ಲಿ । ಕರಣವಿಟ್ಟೆನೈಯ್ಯ॥೫॥ ಮುಂದೆ ಮರಣವನ್ನು ಹರಿಸೋ ಗುರುನಾಥ॥ಮೊ॥೬॥ ಗುರುವೆ ನಿಮ್ಮ ಚರಣದಲ್ಲಿ । ಶಿರವನಿಟ್ಟನರನು ಪುರ । ಹರನಮಿರುವನು

ಗುರುನಾಥ ॥ ಮೊ ॥ ೭ ॥ ಮಂಕನಾದೊಡೇನು ನಿವ ಕಿಂಕರನಾದೊಡೆ ಗುರು । ಶಂಕರನಾಗುವ ಗುರುನಾಥ ॥ ಮೊ ॥ ೮ ॥

೩

ಶ್ರೀಮದದ್ವೈತ ಸದ್ಗುರುಪರಂಪರೆಯನಾ । ಪ್ರೇಮದಿಂಪೇಳ್ವೆ ಗುರುಪುತ್ರ ಲಾಲಿಪುದು ॥ಪ॥ ಆದಿಯೋಳ್ ಶ್ರೀಮಹಾದೇವನವೆನಿಂ ವಿಷ್ಣು। ಪಾದತದನಂತರತಿ ಪದ್ಮಸಂಭವನು ॥ ಶ್ರೀದಯಾಪರ ವಶಿಷ್ಠನುಶಕ್ತಿನಾತನಿಂ । ದಾದಶಕ್ತಿಯುಯೆಂಬ ಯೋಗೀಂದ್ರವರನು ॥ ೧ ॥ ಘನಪರಾಶರನು ವ್ಯಾಸನು ಶುಕಸು ಗೌಡಪಾ । ದನು ವಿಮಲಗೋವಿಂದ ಯೋಗೀಂದ್ರವರನು ॥ ಗಣಿಸೆ ತಚ್ಛಿಷ್ಯನೆಂ । ದೆನಿಸಿ ಭೂಮಂಡಲದಿ । ಜನಿಸಿದನು ಶ್ರೀಶಂಕರಾಚಾರ್ಯವರ್ಯ॥೨॥ ಈತನೇ ಬ್ರಹ್ಮಸೂತ್ರೋಪನಿಷದಮಲ ಸ । ದ್ಗೀತಾದಿ ಭಾಷ್ಯಕೃದ್ಗುರುಚಕ್ರವರ್ತಿ ॥ ಪಾತಕಿಗಳೆಂದು ಬಳಲುವರನೆಲ್ಲರನು ಪರ । ಮಾತ್ಮನು ಮಾಡಿದವನೀ ದಯಾಮೂರ್ತಿ ॥ ೩ ॥ ಮೈರಾಳ ಕೌಳಯಾಮಳವಾಯುವೀಯ್ಯ । ಕೌಬೀರ ಮೊದಲಾದ ಮುನ್ನೂರು ಮತಗಳನು ॥ ಬೇರುಸಹಿತುತ್ತರಿಸಿ ಷಣ್ಮತಗಳನು ನಿಲಿಸಿ । ಚಾರ್ವಾಕನೆಂಬ ನಾಸ್ತಿಕನ ಮುರಿದವನು ॥ ೪ ॥ ವಿಹಿತ ಕರ್ಮಾರಣ್ಯಮಧ್ಯದೊಳು ಶಿಲುಕಿ ಬಳಲುತ । ಹಿಂದುಮುಂದುಗಾಣದೆ ದುಃಖಪರನು ॥ ಹಿತವೆನಿಪ ನಿತ್ಯನಿರ್ಮಲಪರನಾರಿ ದೈಕ । ಪಥವ ತಾತೋರಿ ಲೋಕವನು ಪೊರೆದವನು ॥ ೫ ॥ ಈಶ್ವರನೆ ಶ್ರೀಶಂಕರಾಚಾರ್ಯರೂಪಿನಿಂ । ವಿಶ್ವದೊಳಗವತರಿಸಿ ಲೋಕವನು ಪೊರೆದು । ವೈಶಾಖ ಶುದ್ಧದ್ವಾದಶಿಯ ದಿವಸದೊಳು ತಾ । ಶಾಶ್ವತಾಖಂಡರೂಪವನು ಹೊಂದಿದನು ॥ ೬ ॥ ಸಾಧು ಶ್ರೀವಿಶ್ವರೂಪಾಚಾರ್ಯ ತಚ್ಛಿಷ್ಯ । ಬೋಧ ಘನಯೋಗಿಯುಂಜ್ಞಾನಗಿರಿವರ್ಯ॥ ಆದನಾತನಿಗೆ ಶಿಷ್ಯ ಜ್ಞಾನಗಿರಿವರ್ಯ । ತತ್ಪಾದಶಿಷ್ಯನು ಸಿಂಹಗಿರಿಯೋಗಿವರನು ॥ ೭ ॥ ತತ್ವದಿಂದ್ಪಾತಗೀಶ್ವರತೀರ್ಥ ನರಸಿಂಹ । ತೀರ್ಥ ವಿದ್ಯಾಶಂಕರಾಖ್ಯನಾಬಳಿಕ ॥ ಆತನಿಗೆ ಭಾರತೀ ಕೃಷ್ಣತೀರ್ಥಾಚಾರ್ಯ । ತತ್ಪಾದಶಿಷ್ಯ ವಿದ್ಯಾರಣ್ಯಮುನಿಯು ॥ ೮ ॥ ಸಕಲ ನಿಗಮವ್ರಾತಗಳಿಗೆಲ್ಲ ಭಾಷ್ಯವನು । ಪ್ರಕಟಿಸಿದನುಪನಿಷದ್ಭಾಷ್ಯಗಳನೂರರ । ಅಕಳಂಕ ಧರ್ಮಶಾಸ್ತ್ರಗಳ ವ್ಯಾಕರಣಮಾಂ । ತ್ರಿಕ ಮುಖ್ಯಶಾಸ್ತ್ರಗಳ ರಚಿಸಿದವನೀತ ॥ ೯ ॥ ಈತನೊಳಗಿರುವ ವಿದ್ಯೆಗೆ ಪಾರಗಾಣದಿರ । ಲೀತ ವಿದ್ಯಾರಣ್ಯನೆನಿಸಿದನು ಜಗದಿ ॥ ಭೂತಳ

ದೊಳೀ ಮಹಾಪುರುಷನವತರಿಸಿ। ಪ್ರಖ್ಯಾತವಾಯಿತು ವಿಮಲವೇದಾಂತತತ್ವ ॥ ೧೦ ॥ ವರಲಕ್ಷ್ಮಿಯನು ಕುರಿತು ಘೋರತಪವನುಮಾಡಿ ಹರುಷದಿಂ ಸ್ವರ್ಣ ವೃಷ್ಟಿಯನು ತಾಸುರಿಸಿ ॥ ವಿರಚಿಸಿದನಾಗ ವಿದ್ಯಾನಗರವೆಂಬ ಹೊಸ। ಪುರವ ನದಬುಕ್ಕನಿಗೆ ಪಟ್ಟವನುಗಟ್ಟಿ ॥ ೧೧ ॥ ಮಕರತೋರಣತೀರ್ಥ್ಯಗಾಂದೋಳನಾದಿ ಬಹು। ಸುಕರ ಭೂಮಂಡಲಾಚಾರ್ಯ ಗುರುವರ್ಯ ॥ ಪ್ರಕಟಿತರ ವೇದಾಂತ ಸಿದ್ಧಾಂತ॥ ಮಕುಟನೆಂಬೀ ಬಿರುದಪಡೆದ ಘನಶೌರ್ಯ ॥ ೧೨ ॥ ಈತನಿಂ ಮುಂದಕ್ಕಿಪ್ಪತ್ತೈದು ತಲೆಗಳೆದು ಪೂತಮಾಯ್ತಿದರಿಂದಲೀ ಧರಾತಳವು ॥ ಭೂತಳದೊಳದರೊಳಗೆ ಶಾಖೋಪಶಾಖೆ ಸಂ। ಜಾತವಾಯಿತು ಇದುವೆ ಗುರುಪರಂಪರೆಯು ॥ ೧೩ ॥ ಗುರುವಿನಿಂದುಪದೇಶವನು ಪಡೆದ ಶಿಷ್ಯ ನಿಜ। ಗುರು ಪರಮಗುರುವು ಪರಮೇಷ್ಠಿ ಗುರುವೆಂಬ। ಗುರುನಾಮಗಳಕೂಡೆ ನಿಜನಾಮವೆರಸಿ ಸಂ। ಸ್ಮರಿಸಿ ತಾವೊದಲು ಬಳಿಕೇಕಚಿತ್ತದಲಿ ॥ ೧೪ ॥ ಛಂದಸ್ಸುರುಷಿ ದೇವತಾಧ್ಯಾನ ಸಹಿತ ಗುರು। ವಿಂದ ಪಡೆದಿರುವ ಮಹಾವಾಕ್ಯ ಮಂತ್ರವನು ॥ ಚಂದದಿಂ ಜಪಿಸಿ ತಜ್ಜಪವ ಗುರುಪದಕೆ ಮುದ। ದಿಂದಲರ್ಪಿಸ ಬೇಕು ಮುಕ್ತಿಬಯಸುವವನು ॥ ೧೫ ॥ ಅವಿಧಿಕೃನ್ನರಕಮಶ್ನುತೆಯೆಂದು ಶೃತಿಪೇಳ। ಲವಿಧೀಯಿಂದ ಮಾಳ್ಪ ಜಪ ವ್ಯರ್ಥಮೆನಿಸುವದು ॥ ಸುವಿವೇಕ ವಿಧಿಪೂರ್ವಕೋಪದೇಶವನು ಪಡದು। ಅಮಿತಂ ಗುರುಶಂಕರನ ಭಜಿಸ ಬೇಕೈ ॥ ೧೬ ॥

ಇತಿ ಮಂಗಳಾಚರಣಂ

# ಭಕ್ತಿವೈರಾಗ್ಯ ಪ್ರಕರಣಂ

೪

ಇನ್ನಾದರೀ ಜನ್ಮಕೆ । ಬೇಸರಿಕೆ ನಿನ್ನೊಳಗೆ ತೋರಿದೇಕೆ । ನಿನ್ನ ಮಾನಸದ ಬಯಕೇ । ಯಲೆಜೀವ ಶೂನ್ಯವಾಗದು ಯಾತಕೆ ॥ ಪ ॥ ಪಡಿಯದಿಲ್ಲಪದವಿಯಿಲ್ಲ । ನೀನಿನ್ನು । ನುಡಿಯದಿಹ ನುಡಿಗಳಿಲ್ಲ ॥ ಕೊಡದಿರುವ ದಾನವಿಲ್ಲ । ನೋಡದಿಹ ಬೆಡಗು ಬೇರೊಂದಿಲ್ಲ ॥ ೨ ॥ ಕೂಡದಿಹ ಕುಲವಂದಿಲ್ಲ । ಕಣ್ಣಿನಿಂ । ನೋಡದಿಹ ನೋಟವಿಲ್ಲ ॥ ಆಡದಿಹ ಆಟವಿಲ್ಲ । ನೀಬಿಡದೆ । ಮಾಡದಿಹ ಪಾಪವಿಲ್ಲ ॥ ೩ ॥ ಹೊಂದದಿಹ ನರಕವಿಲ್ಲ । ಯಮ ನಿನ್ನ ಬಂಧಿಸದ ಪಾಶವಿಲ್ಲ । ವಂದಿಸದ ದೈವವಿಲ್ಲ । ನೀನರಿಯ । ದಂದ ಚಂದಂಗಳಿಲ್ಲ ॥ ೪ ॥ ತಿಳಿಯದಿಹ ವಸ್ತುವಿಲ್ಲ । ಅನುಭವಿಸದಿರುವ ವಿಷಯಂಗಳಿಲ್ಲ । ಅರಿಯದಿಹ ತತ್ವವಿಲ್ಲ । ನೀನೋದದಿರುವ ವಿದ್ಯಗಳೆ ಇಲ್ಲ ॥ ೫ ॥ ಪಠಿಸದಿಹ ಮಂತ್ರವಿಲ್ಲ । ಸಾಧಿಸದ ಚಟುಲ ತಂತ್ರಂಗಳಿಲ್ಲ । ನಟಿಸದಿಹ ನಡತೆಯಿಲ್ಲ । ತೋರಿಸದಪಟು ಮಹಾಮಹಿಮೆಯಿಲ್ಲ ॥ ೬ ॥ ವಿರಚಿಸದ ಕರ್ಮವಿಲ್ಲ । ನೀಹೊಂದದಿರುವ ಯೋನಿಗಳೆಯಿಲ್ಲ । ತಿರುಗದಿಹ ಲೋಕವಿಲ್ಲ । ನಿನ್ನ ಸುಡದಿರುವ ಸುಡುಗಾಡೇಯಿಲ್ಲ ॥ ೭ ॥ ನೋಡಿದುದನೇ ನೋಡುವೆ । ತಿಂದು ತೇಗಾಡಿದುದನೇ ತಿನ್ನುವೆ ॥ ಬೇಡಿದುದನೇ ಬೇಡುವೆ । ಹಿಂದೆ ನೀನಾಡಿದುದನೇ ಆಡುವೇ ॥ ೮ ॥ ಇನಗಿರಿಯೊಳೊಂದನಿಟ್ಟು । ಆಸ್ತಿಗಿರಿತನಕ ಸೊನ್ನೆಗಳನಿಟ್ಟು । ಗಣಿಸಲಾ ಲೆಕ್ಕದಷ್ಟು । ತನುಗಳೊಳು ಜನಿಸಿ ನೀ ಕಷ್ಟಪಟ್ಟು ॥ ೯ ॥ ತನುವಬೇರಿರಿಸಲಿಲ್ಲ । ನಿನ್ನ ನಿಜವನು ನೀನು ಕಾಣಲಿಲ್ಲ । ಜನನವನು ಹರಿಸಲಿಲ್ಲ । ಗುರುಶಂಕರನಪದದಿ ಬೆರೆಯಲಿಲ್ಲ ॥ ೧೦ ॥

೫

ಮಾಡಬಾರದೂ । ಮುಂದೆ ಕೇಡು ತನಗದು। ಬೇಡಿಫಲವ ಡಂಭದಿಂದ। ಕೂಡಿ ಕಾಮ್ಯಪೂಜೆಗಳನು ॥ ಮಾ ॥ ಪ ॥ ಸುತನೊಳಿರುವ ಹಿತವಪ್ರಥಮು । ಪತಿಯೊಳಿಟ್ಟು ತನ್ನ ದೇಹ । ಮತಿಯು ಧನವಕೊಡದೆ ಶಿವಗೆ । ಸುತರ ಹಿತವ ಬಯಸಿ ನುತಿಯ ॥ ಮಾ ॥ ೧ ॥ ಶಿರಿಯು ಹರುಷವಿರಲು ತನಿಪೆ । ಮರತು

ಹರನಚರಣಗಳನು । ಮರಣಭೀತಿಬರಲು ಹರನೆ । ಪೊರೆಯೊಯೆಂಬ ಕಾವ್ಯ ಜಪವ ॥ ಮಾ ॥೨॥ ಪರಮಸದ್ಗುರು ಶಂಕರಾರ್ಯನ ಚರಣಕೃಪೆಗೆ ದೂರನಾಗಿ । ಧರೆಯಭೋಗಕಾಗಿ ಬರದೆ । ತಿರಿಯಬಯಸಿ ಕೊರತಪವ ॥ ೩ ॥

೬

ಬಿಡುಬಿಡು ರಾಜನಪೂಜೆಯನು । ಮೊದಲೊಡಲಭಿಮಾನವತೊರೆ ನೀನು । ಮಡದಿಯಕಾಣದೆ ಮಿಡುಕುತ ಮನದಲಿ । ಮೃಡನುಡಿ ಪೂಜಿಸಿ ಫಲವೇನು ॥ ಹರನೊಳು ಚಿತ್ತವನಿಡಲಿಲ್ಲ । ಶಿವಶರಣರಗರ್ಘವ ಕೊಡಲಿಲ್ಲ । ಮರಣದಭೀತಿಗೆ ಶಿವಪೊರೆಯೆಂದರೆ । ನರಕದಯಾತನೆ ಬಿಡದಲ್ಲ ॥೧॥ ಆಗಮ ಧರ್ಮಂಗಳ ತೊರೆದು ಸತಿಭೋಗದಿ ಸ್ಮೃತಿಯಿಲ್ಲದೆ ಮೆರೆದು ।ರೋಗವುಬಂದರೆ ಹರಪೊರೆಯೆನಲಾ । ರೋಗವು ನಿನ್ನ ಕೊಲ್ಲದೆ ಬಿಡದು॥ ದೃಢಶನ ಶಿವಭಕ್ತಿಯ ಬಿಟ್ಟು ನಿಜ । ಮಡದಿಯ ಮೋಹಕೆ ವಳಪಟ್ಟು । ಸಡಗರದೊಳಗಿರೆ ದೂತರು ಬರಲವ । ರೊಡನೋಡುವೆ ಯಲ್ಲವಬಿಟ್ಟು ॥ ೩ ॥ ತರುಣಿಗೆ ಮುತ್ತಿನ ಮಾಲೆಗಳು । ಪುರಹರನಿಗೆ ಹತ್ತಿಯ ಜೂಲುಗಳು । ಸರಸರಿ ನೀಮಾಡುವ ಈ ಭಕ್ತಿಗೆ । ಹುರಿವರು ನಿನ್ನೆಮನಾಳುಗಳು ॥ ೪ ॥ ಶಿರಿಯೊಳು ಶಿವನಾಮವ ತೊರೆದು । ಅತಿಹರುಷದಿ ಕಣ್ಕಾಣದೆ ಮೆರೆದು ಬರಬಂದರೆ ಶಿವಪೊರೆಯೆಂದರೆ ನಿನ್ನುರು ನರಕದೊಳಿರಿಸುವ ಮುರಿದು ॥ ೫ ॥ ಹರನೊಳು ಚಿತ್ತವನಿಡಲಿಲ್ಲ । ಶಿವಶರಣರ ಸೇವೆಯು ಹಿತವಿಲ್ಲ ॥ ತರಳರಪೊರೆಯೋನಿವನೀಯೆಂದರೆ । ಪುರಹರ ಕೇಳ್ನಿನ್ನಾಳಲ್ಲ ॥ ೬ ॥ ದಾಸರಿಗನ್ನವನಿಡಲಿಲ್ಲ । ಪರದೂಷಣೆಗಳ ನೀಬಿಡಲಿಲ್ಲ । ಕಾಸನು ತೋರಿಸಿ ಶಿವನೇ ಪೊರೆಯೆನಲಾ ಶಿವನಿಗೆ ಬಡತನವಿಲ್ಲ ॥ ೭ ॥ ಪಾಪದ ಕೃತ್ಯವು ಕೆಡಲಿಲ್ಲ । ಪರಿತಾಪವಗೈವುದು ಬಿಡಲಿಲ್ಲ । ದೀಪವ ಹಚ್ಚಿಸಿ ಶಿವನೇ ಪೊರೆಯೆನಲಾಪರಮಗೆ ಕತ್ತಲೆಯಿಲ್ಲ ॥ ೮ ॥ ಶಿರಿಬರಗಳು ಸಮನಾಗಿಲ್ಲ । ಈ ಶರೀರಭ್ರಾಂತಿಯು ಬಿಡಲಿಲ್ಲ । ಬರಿದೇದುಃಖವು ಹರಿಯಲಿ ಯೆಂದರೆ । ಗುರುಶಂಕರ ನಿನ್ನೊಶನಲ್ಲ ॥ ಬಿಡು ॥ ೯ ॥

೭

ಯಾವಲೋಕದ ಭಕ್ತಿಯೋ ಇದು । ಕಾವಲೋಕದ ಮುಕ್ತಿಯೋ । ಭಾವದೊಳು ಪರಿಶುದ್ಧವಿಲ್ಲದ್ಯಾವಪರಿಯ ವಿರಕ್ತಿಯೋ ॥ ಪ ॥ ಭೋಗ

ಬಂದರೆ ಸತಿಗೆ ವೈದ್ಯರಿಗಾಗಿ ಧನವನು ಸುರಿಸುವೇ । ಯೋಗಿ ಸೇವೆಗೆಯೆನಲು ಶಿರವನು । ಬಾಗಿ ಭೂಮಿಗೆ ಕೊರಗುವೆ ॥ ಭೋಗಿಸಲು ವಿಷಯುವನು ಹಂದಿಯು । ಜೋಗಿಯುಂದದಿ ತಿರುಗುವೇ । ನಾಗಶಯುನನಗುಡಿಗೆ ಬಾರೆನ । ಲಾಗುತಿರಲದುಯನ್ನುವೇ ॥ ೧ ॥ ಬಾಲತರುಣಿಯ ಕೇಳಿಗಾದರೆ । ಲೀಲೆ ಯಿಂದೋಡ್ಯಾಡುವೆ । ಕಾಲಕಂಠನಗುಡಿಗೆ ಬಾರೆನೆ । ಕಾಲು ಉಳುಕಿದೆ ಯೆನ್ನುವೇ । ಸೂಳೆಯರ ಕುಣಿದಾಟಕಾದರೆ ಶಾಲುಜೋಡಿಯ ಹೊದಿಸುವೆ । ಫಾಲನಯುನನ ಸೇವೆಗೆಂದರೆ ನಾಳೆಬಾರೆಂದುಸುರುವೇ ॥ ೨ ॥ ಹಾದಿಬೀದಿಯ ಕಾಡುಸುದ್ದಿಯೊಳಾದರದಿ ನೀಕೂಡುವೇ । ವೇದವಾಕ್ಯವಪೇಳೆ ಹೊಟ್ಟೆಯ ಸಾಧನಗಳೆಂದಾಡುವೆ । ಬಾಧೆಸುತನಿಗೆ ತೋರಿದರೆ ಹೊಲೆಮಾದಿಗರ ಕಾಲ್ಕಟ್ಟುವೇ । ಸಾಧುಸೇವೆಗೆ ಕರದೊಡಿಲ್ಲದ । ವಾದುವಾಡುತ ಮಲಗುವೇ ॥ ೩ ॥ ನೋಡಿ ವಿಷಯುದ । ಸೂಢಿಸುಖವನು । ಕೂಡಿಭೇದವತೊಟ್ಟರೈ । ನಾಡೆ ಕರ್ಮದಿಕೂಡಿ ದುಃಖದ ಕಾಡಿನೊಳು ಕಾಲಿಟ್ಟರೈ । ಕೇಡುತೋರದ ರೂಢಮಾದಾರೂಢ ಮಾರ್ಗವಬಿಟ್ಟರೈ । ಮೂಢಮನುಜರು ಮಾಡಿ ಪೂಜೆಯು । ಬೇಡಿ ಫಲಗಳ ಕೆಟ್ಟರೈ ॥ ೪ ॥ ಧಾರುಣಿಯ ಸುಖಕಾಗಿ ಲಜ್ಜೆಯ ತೊರೆದು ನೀಚರಿಗೆರಗುವೆ । ಬಾರಿಭಾರಿಗು ಭಕ್ತಿಯಿಂದವರಿರುವ ಠಾವಿಗೆ ತಿರುಗುವೇ ॥ ಮಾರಿ ಹುಂಕರಿಸಿದರು । ಧರೆಯೊಳಗುರುಳಿ ದುಃಖಿಸಿ ಕೊರಗುವೇ । ವೀರಗುರುಃಶಂಕರನ ಭಜಿಸೆನೆ । ಬರಿದೆ ನಿದ್ರೆಯೊಳೆರಗುವೇ ॥ ೫ ॥

೮

ಯಾವಕರ್ಮವೋ ಶಿವಶಿವ । ದ್ಯಾವ ॥ ಪ ॥ ಭಾವಕೆಶಿಲುಕದ ಭವ್ಯ ಚಿದಾತ್ಮಗೆ । ಭಾವಿಸಿ ಬಂಜಿಪ ಭಾವಿಸಿ ಮುಳುಗುವ ದ್ಯಾವ ॥ ಅ ॥ ಮೂರು ಗುಣಂಗಳ ಮೀರಿದ ಶಿವನೊಳು । ಸೇರದೆ ಮಡಿಯೆಂದು । ಹಾರುತ ತಿರುಗುವ್ರ ದ್ಯಾವ ॥ ೧ ॥ ಅಂಡವಿದನು ಪಿಂಡಾಂಡದೊಳರಿಯದೆ । ಚಂಡಿಸುತೀ ಮಲ ಭಾಂಡವ ತೊಳೆಯುವ ॥ ದ್ಯಾವ ॥ ೨ ॥ ಈಶನೊಳಿಲ್ಲವ ಪಾಶವಕಲ್ಪಿಸಿ । ದೋಷಿಯನುತಲುಪ । ವಾಸದಿಬಳಲುವ ॥ ದ್ಯಾವ ॥೩॥ ವಡಲಿನ ತೊಡಕನು ಬಿಡಿಸುವ ಗುರವರನಡಿಗಳ ಪಿಡಿಯುದೆ ಮುಡಿಮುಡಿಯೆಂಬುವ ॥ ದ್ಯಾವ ॥ ೪ ॥ ಸಾಕ್ಷಿಯೆನಿಸುತೀಕುಕ್ಷಿಯೊಳಿಹ ವಿರುಪಾಕ್ಷನ ಕಾಣದೆ । ಅಕ್ಷತೆಯೆರಚುವ್ರ ॥

ದ್ಯಾವ ॥ ೫ ॥ ತಿಳಿಯದೆ ತತ್ವವ ಕಳಿಯದೆ ಮೋಹವ। ಸುಳಿಯದೆ ಸುಖದೊಳು। ಛಳಿಯೊಳು ಮುಳುಗುವದ್ಯಾವ ॥ ೬ ॥ ಪುರದೊಳು ನೆಲಸಿಹ ಪುರುಷನ ಶೋಧಿಸಿ। ಹರಿಸದೆ ಜನ್ಮವ ಮರವನು ಸುತ್ತುವುದ್ಯಾವ ॥ ೭ ॥ ಎಂದಿಗು ತೊಲಗದೆ। ಬಂದಿರುವೀಭವ। ಬಂಧನವಳಿಯದ ವಂದನೆ ಮಾಡುವುದ್ಯಾವ ॥ ೮ ॥ ಗಾತ್ರದೊಳಿಹ ನಿಜಸೂತ್ರವ ಕಾಣದೆ। ಪಾತ್ರೆಯ ತೊಳೆಯುತ ಮೂತ್ರದೊಳುರುಳುವುದ್ಯಾವ ॥೯॥ ಸೋಹಂಭಾವದೊಳೂಹೆಗೆ ಶಿಲುಕದ। ಮೋಹವಹರಿಸದೆ। ದೇಹವಬಾಧಿಪುದ್ಯಾವ ॥ ೧೦ ॥ ಕರಣದ ಧರ್ಮದಿ ಬೆರತು ಮರೆತು ತನ್ನ। ನರಕನಾಕಗಳಿಗೆ ತಿರುಗುತ ಬಳಲುವುದ್ಯಾವ ॥ ೧೧ ॥ ಕಲ್ಪಿಶಿಜಾತಿಯ ಜಲ್ಪಿಶಿಭೇದವ। ನಲ್ಪನುಯವಿಸಿ ವಿಕಲ್ಪದಿ ಕೂಡುವುದ್ಯಾವ ॥ ೧೨ ॥ ನಿತ್ಯಚಿದಾತ್ಮನ ತತ್ವವನರಿತು ಮಹತ್ವವ ಪಡೆಯದೆ। ಮೃತ್ತಿಕೆಗೆರಗುವದ್ಯಾವ ॥೧೩॥ ಕೂಡದೆ ಗುರುವನು। ನೋಡದೆ ನಿಜವನು। ನಾಡಿನ ಸಿರಿಗಳ ಬೇಡುತ ತಿರುಗುವದ್ಯಾವ ॥ ೧೪ ॥ ಕರ್ಮದಿ ಬೆರೆಯದ ನಿರ್ಮಲ ತಾನೆಂಬ ಮರ್ಮವನರಿಯದೆ। ಚರ್ಮವ ತೊಳೆಯುವುದ್ಯಾವ ॥೧೫॥ ಚಿನುಮಯ ಶಿವ ತನ್ನ ನೆನೆಯುವ ಮನುಜರ। ಮನುಜರ ಮನದೊಳು ತಪಿಸುವುದ್ಯಾವ ॥ ೧೬ ॥ ಸ್ಥಿರದೊಳು ಗುರುಶಂಕರನೊಳು। ಬೆರಿಯದೆ ಉರು ಸಂಸಾರದ ಶರೆಯೊಳು ಶಿಲುಕುವದ್ಯಾವಕರ್ಮವೋ ॥ ೧೭ ।

೯

ಎಲ್ಲಿಹನೆಂದು ಪೂಜಿಸಲಿ। ಶಿವನಿಲ್ಲದೆ ಠಾವತೋರಿಸಲಿ ಕಲ್ಲಿನೊಳಗೊ ಮಣ್ಣಿನಲ್ಲೊ ಲೋಹಗಳಲ್ಲೊ ॥ ಹುಲ್ಲಿನೊಳಗೊ ಮರದಲ್ಲೊ ನೀರೊಳಗೊ। ॥ಪ॥ ನಿಲಕದೊಡೆಯೊಳು ನಿಲ್ಲುವನು ತನ್ನ। ಕಳುಹಲಾಕ್ಷಣದೊಳೋಡುವನು ನಿಲಿಸುವ ಕಳಿಸುವ ಭ್ರಾಂತಿಯ ಮೂಲವ। • ತಿಳಿದವರೊಡನೆ ತಾನೆರಕವಾಗಿಹನು ॥ ೧ ॥ ಏನೆಸಗಲು ಸುಮ್ಮನಿಹನು। ಬರಿದಾನಮಾಡಿದರು ಒಪ್ಪುವನು। ಧಾನ್ಯಪುಟ್ಟಿದ ಮೂಲಮರ್ಮವನರಿತ ಸು। ಜ್ಞಾನಿಗಳೊಡನೆ ತಾ ಸರಸವಾಡುವನು ॥೨॥ ಮೆರಸಿದಲ್ಲೆಲ್ಲಾ ಮೆರೆಯುವನು। ನೀರೊಳಿರಿಸಿದೊಡೆಲ್ಲೆ ಮುಳುಗಿಹನು। ಮೆರಸಲಿರಿಸಲು ಶಿವನು ವಶನಲ್ಲೆಂಬುದರಿತವರೊಡನೆ ತಾ ಬೆರತುಕೊಂಬುವನು ॥ ೩ ॥ ಮಲಗೀಸಿದಲ್ಲಿ ಮಲಗುವನು।

ಚರ್ಮದೊಳಸುತ್ತಿಟ್ಟರಲ್ಲೆ ಇರುವನು ಛಳಿಗಾಳಿ ಬೀಸಲು। ಕತ್ತಲೆಯೊಳು ಕರೆದರು ಬಳಲಿಕೆ ತೋರದೆ ತಾನೋಡಿಬರುವನು ॥೪॥ ಅಲ್ಲುಂಟಿಲ್ಲಿಲ್ಲೆಂಬುದಿಲ್ಲ ಶಿವನಿಲ್ಲದ ವಸ್ತುವೆಯಿಲ್ಲ। ಇಲ್ಲಿಲ್ಲವಲ್ಲುಂಟೆಂದರಸುವ ಮೂಢರಿಗಲ್ಲಲ್ಲಿ ತದ್ಭಾವದಂತಿಹನಲ್ಲ ॥ ೫ ॥ ಈ ವಿಧದಿಂದಲಾ ಶಿವನು ನಮ್ಮ ಭಾವನೆಯೊಳಗೆ ಕೂಡಿಹನೂ। ಭಾವಿಸದೀ ಜಡದೊಳಗೆನ್ನ ನಿರ್ಮ್ಮೊಳು। ಭಾವಿಸಿ ಶಿವನೇ ನೀವಾಗಿರೆನ್ನುವನು ॥ ೬ ॥ ಎಸೆವ ತ್ರೈಕಾಲವನಿಗಿಲ್ಲ। ನೀಕಲ್ಪಿಸಿದೊಡೆ ಬ್ಯಾಡೆಂಬೊನಲ್ಲ॥ ಅಸಮ ಶ್ರೀಗುರುಶಂಕರಾರ್ಯನೊಳ್ ಬೆರದೇಕ। ರಸನಾ ಶಿವತಾನಹನಲ್ಲ ॥ ಎ ॥ ೭ ॥

೧೦

ಪಶುಪಕ್ಷಿ ಮೊದಲಾದ ಜನ್ಮವ ಕಳಕೊಂಡೆ। ಫಲವೇನದರಿಂದ ॥ ಅಸಮಾನ ವಾದ ಮಾನವಜನ್ಮ ಪಡಕೊಂಡೆ ॥ ಫಲವೇನದರಿಂದ ॥೧॥ ಅದರೊಳುತ್ತಮ ವಾದ ಪುರುಷನೆನೀನಾದೆ ಫಲವೇನದರಿಂದ ॥ ಮುದದಿಂದದರೊಳು ನಾವಿಪ್ರ ನೆಂದೆನಿಸಿದೆ ॥ ಫ ॥ ೨ ॥ ವರವೇದಮಾರ್ಗ ನಿಷ್ಠೆಯನನುಸರಿಸದೆ ಫಲವೇನದ ರಿಂದ ॥ ಹಿರಿದಾದಾಗಮಶಾಸ್ತ್ರಂಗಳನೆಲ್ಲ ಕಲಿತೇ ॥ ಫ ॥ ೩ ॥ ಬೇಕಾದ ಯಜ್ಞ ವ್ರತಗಳೆಲ್ಲಮಾಡಿದೆ ॥ಫ॥ ನಾಗಲೋಕಕೆಪೋಗಿ ರಂಭೆಯೊಳ್ಸುಖಿಸಿದೆ ॥ಫ॥೪॥ ಕುಂಭಿಶಿ ಮರುತನಬಿಡದೇ ಬಂಧಿಸಿದೆ ॥ ಫ ॥ ಇಂಬಾಗೀತನುವ ಶಶಕಲ್ಪ ನಿತಸಿದೆ। ಮಾನವರೊಳಗತಿಮಾನ್ಯನೆಂದೆನಿಸಿದೆ। ಫಲವೇನದರಿಂದ ॥ ೫ ॥ ಗಂಗಾದಿ ಪುಣ್ಯತೀರ್ಥದೊಳೆಲ್ಲ ಮುಳುಗಿದೆ ॥ ಫಲವೇನದರಿಂದ ॥ ೬ ॥ ನಾನಾ ದಾನಗಳ ನಿಧಾನಿಸಿಮಾಡಿದೆ ॥ ಫ ॥ ೭ ॥ ಸೇರಿರುಷಮ್ಮೆಯ ತಾರಾಕವನು ಕಂಡೆ ॥ ಫಲವೇನದರಿಂದ ॥ ೮ ॥ ತೋರಿತು ನಿನ್ನ ಬೆಳಕೆ ಬೇರೆವಿಧವಾಗಿ ಫಲವೇನದರಿಂದ ॥ ೯ ॥ ಗುರುಶಂಕರಾರ್ಯನೊಳ್ಬೆರದೇಕನಾಗಿ। ನಿನ್ನಯ ನಿಜವನು ಕಾಣದೆ। ಮರಣಜನ್ಮವಕಳಿಯದೆ ಕರ್ಮಮಾಡಲು ॥ ಫ ॥ ೧೦ ॥

೧೧

ಗತಿತೋರದ ಪರಿಪೂರ್ಣಪರಾತ್ಮಗೆ। ಕ್ಷಿತಿಯೊಳಗಾವಾಹನೆಯುಂಟೆ। ಮಿತಿಯಿಲ್ಲದ ಬ್ರಹ್ಮಾಂಡಾಧಾರನಿ। ಗತಿಶಯಮಾದಾಸನುಂಟೆ ॥೧॥ ನಿರುಪಮ ನಿರ್ಗುಣ ನಿತ್ಯನಿರಂಜನ ನಿರವಧಿಕನಿಗಾಚಮನುಂಟೆ। ಕರೆಮುರಿಯಿಲ್ಲದಖಂಡ

ಕಾರಗೆ ಬರಿದೆಸಳುವ ವಾದ್ಯಗಳುಂಟೆ ॥ ೨ ॥ ನಿತ್ಯಶುದ್ಧವಾಗಿಹ ಸದ್ರೂಪಗೆ ಮರ್ತ್ಯಸ್ನಾನದ ಬೆಡಗುಂಟೆ । ಮತ್ತೀಬ್ರಹ್ಮಾಂಡಳಿಯನುದರದಿ ಪೊತ್ತಗೆ ವಸ್ತ್ರಗಳುಡಲುಂಟೆ ॥ ೬ ॥ ಸಲೆ ನಿರ್ಲೇಪಾತ್ಮಕ ಚಿನ್ಮೂರ್ತಿಗೆ ಬೋಳಿಯುವ ಗಂಧಾದಿಗಳುಂಟೆ । ಮೂಲಾಧಾರಗಳಿಲ್ಲದ ಮೂರ್ತಿಗೆ ಮೇಲಾದಾಭರಣ ಗಳುಂಟೆ ॥ ೪ ॥ ರೂಪುನಾಮವಿಲ್ಲದ ಪರಮಾತ್ಮಗೆ । ಧೂಪದೀಪಗಳ ಬೆಡಗುಂಟೆ । ಶ್ರೀಪರ ಚಿದ್ಘನ ನಿತ್ಯತೃಪ್ತ ಸದ್ರೂಪಗೆ ನೈವೇದ್ಯಗಳುಂಟೆ ॥೬॥ ಸಾರಪರಂಜ್ಯೋತಿರ್ಮಯನಿದಿರೊಳು । ನೀರಾಜನ ಬೆಳಗುವದುಂಟೆ । ಪಾರ ರಹಿತ ಪರಿಪೂರ್ಣಾತ್ಮಕನೊಳು । ಬೇರೆ ಪ್ರದಕ್ಷಿಣೆಯೆಡೆಗುಂಟೆ ॥೬॥ ಅದ್ವಯ ನೆನಿಸಿದ ಚಿತ್ತಿಗೆನೆಲದೊಳು । ಬಿದ್ದೆರಗುವ ವಂದನೆಯುಂಟೆ । ವೇದಗಳಿಗೆ ಗೋಚರಿಸದ ಮೂರ್ತಿಗೆ । ಭೇದದನುತಿಗಾಸ್ಪದವುಂಟೆ ॥ ೭ ॥ ಹೊರವಳ ಗೆಲ್ಲಿಯು ತಡೆಯಿಲ್ಲದೆ ತುಂ । ಬಿರುವನಿಗುದ್ವಾಸನೆಯುಂಟೆ । ಗುರುಶಂಕರ ನಡಿಗಳ ಪಿಡಿದವರಿಗೆ । ಮರಣಜನ್ಮಗಳ ಭಯವುಂಟೆ ॥ ೮ ॥

೧೨

ಮಂಗಳಂ ಜಯಜಯ । ಮಂಗಳಂ ಶುಭಮಂಗಳಂ । ಮುಕ್ತಿಗಧೀಶನಿಗೆ ವಲಿದದು ನೀನಲ್ಲ । ವಡಲಿಗಾಶ್ರಯನಲ್ಲ ವಡಲವೀಕ್ಷಣವೆಂದರುಪಿ । ವಡಲಿನ ತೊಡಕನುಬಿಡಿಸಿ । ನಮ್ಮೆಲ್ಲರ । ಮೃಡನವಾಡಿದ ನಿಜದೇವನಿಗೆ ॥ಮಂ॥ಪ॥ ದೇಹವ ದೇಹವ ಮೋಹವ ಮೋಹದ ಸಾಹಸಂಗಳನೆಲ್ಲ ಸೆರೆಕಳೆದು ॥ ಊಹೆಗೆ ಶಿಲುಕುವ ಸೋಹಂಕಳದುಳುಮೇನೇ । ಹಂಸನೊಳು ತೋರಿಸಿದ ಮೂರ್ತಿಗೆ ॥೧॥ ಜನನಮರಣಗಳ ತನುವಿನೊಳಡಗಿಸಿ ಮನಸಿಗೆ ರಾಗಾದಿಗಳ ನೊಪ್ಪಿಸಿ । ಕನಸು ನೆನಸುಗಳೊಂದನುವಾಡಿ ಕೆಡಿಸದೆ । ಎಮ್ಮನು ಸುಮ್ಮ ತುದಿಗುಳಿಸಿದ ನಿಜದೇವಗೆ ॥ ೨ ॥ ಓಂಕಾರವನು ಸತ್ವಾಹಂಕಾರದೊಳಗಿಟ್ಟು । ಹುಂಕಾರವನು ಭಿನ್ನಪದದೊಳಿಟ್ಟು । ಕಿಂಕುರುಮ್ಮ ಶುಭಂಕರ ಶ್ರೀಗುರು ಶಂಕರನೊಳಗಿಟ್ಟ ಪರಮಾತ್ಮಗೆ ॥ ಮಂಗಳಂ ॥ ೩ ॥

# ತತ್ವವಿಚಾರ ಪ್ರಕರಣ

೧೩

ಗುರುದೇವ ನೀನೆ ದೀನರಬಂಧು । ಸ್ಥಿರಕರುಣಾಸಿಂಧು ॥ ಗುರು ॥ಪ ॥ ಕೊರತೆಯುಪಡಿಸದೆ । ಶರೀರವ ಬಿಡಿಸದೆ । ಶರೆಯೊಳು ನಡಿಸದೆ । ಮರವೆಯು ಕೆಡಿಸದೆ । ಹರುಷವ ಹರಿಸದೆ । ಹರನೊಳು ಬೆರಸದೆ । ಧರಣಿಗೆ ಮರಳದ ಪರಿಯೊಳು ಪೊರದೇ ॥ ಗುರು ॥ ೧ ॥ ನಿನ್ನೊಳು ಸೇರಿದೆ । ಜನ್ಮವ ತೋರದೆ । ಯನ್ನಣೆಬಾರದೆ ಉನ್ನತಿಗೇರಿದೆ । ಧನ್ಯತೆ ತೋರದೆ । ಮಾನ್ಯರ ಮೀರಿದೆ ॥ ಇನ್ನೊಂದರಿಯದೆ ನಿನ್ನೊಳು ಬೆರದೆ ॥ ಗುರು ॥ ೧ ॥ ಗುರು ಚರಣಕೆ ನಿಜಶರೀರವ ಮಾರದೆ । ಪರಮಾನಂದರ ಸಿರಿತನ ಬಾರದೆ ॥ ಕರಣದ ಧರ್ಮವನರಿತದಕೇಳದೆ । ಗುರುಶಂಕರಪದ ದೊರೆವುದು ಬರಿದೇ ॥ ೩ ॥

೮

ಬರಿದೆ ನಾಶಿವನೆಂದೊಡವ ಶಿವನಲ್ಲ । ಸ್ಥಿರಮುಕ್ತಿಸುಖವ ಸದ್ಗುರು ಪುತ್ರಬಲ್ಲ ॥ ಪ ॥ ಮರವೆ ಸಂಶಯುಗಳೆಂಬುದು ಕೆಡಲಿಲ್ಲ । ಪರಮನ ನೆಲೆ ಗೊತ್ತುಗುರಿಕಾಣಲಿಲ್ಲ । ದುರಿತ ಪುಣ್ಯಗಳ ಶಬ್ಧಗಳಡಗೆಲ್ಲ । ಕರಣ ಧರ್ಮಗಳಾವುದದು ವೇದ್ಯವಿಲ್ಲ ॥ ೧ ॥ ಕಾಮಾದಿಗಳು ಹಮ್ಮಿನೊಳು ಹೊಂದಲಿಲ್ಲ ॥ ಹೋಮನೇಮುಗಳೊಂದು ಬಯಲಾಗಲಿಲ್ಲ । ನಾಮರೂಪಗಳಲ್ಲಿ ಪ್ರುಶಿ ತೋರಲಿಲ್ಲ । ಪ್ರೇಮಾಸ್ತಿಭಾತಿ ತನ್ನೊಳು ಹೊಂದಲಿಲ್ಲ ॥ ೨ ॥ ಜರೆಮೃತಿ ಜನನ ದೇಹದೊಳಡಗಿಲ್ಲ । ಹರಣಕ್ಕೆ ಕ್ಷುಧೆತೃಷೆಗಳ ಕೊಡಲಿಲ್ಲ ॥ ಕರಣದೋಳ್ ಸುಖದುಃಖಗಳ ನೀಡಲಿಲ್ಲ । ಅರಿವ ಸಾಕ್ಷಿ ತತ್ವದೊಳು ಕೂಡಲಿಲ್ಲ ॥ ೩ ॥ ಮನದ ಮೋಹವು ಮನಸಿದಾಗಲಿಲ್ಲ । ತನುಧರ್ಮವೆನ್ನದೆಂಬುದು ಕೆಡಲಿಲ್ಲ ॥ ೪ ॥ ಕನಸು ಜಾಗರವೆರಡೊಂದಾಗಲಿಲ್ಲ । ಚಿನುಮಯನಾಗುತ ತಾ ನಿಲ್ಲಲಿಲ್ಲ ॥ ಬರಿ ॥ ೫ ॥ ನಶ್ವರಮಾಯಾಮೋಹವು

ಕೆಡಲಿಲ್ಲ । ದೃಶ್ಯವೆಂಬುದು ಪೋಗಿ ದೃಕ್ಕಾಗಲಿಲ್ಲ ॥ ದೃಶ್ಯಾದೃಶ್ಯಗಳ ಮೂಲವ ಕಾಣಲಿಲ್ಲ । ವಿಶ್ವಾಕಾರತ್ವ ತನ್ನೊಳು ತೋರಲಿಲ್ಲ ॥ ೬ ॥ ಎಲ್ಲಾ ಒಂದೆಂಬುದೊಳಗೆ ನಿಲ್ಲಲಿಲ್ಲ । ಇಲ್ಲಲ್ಲಿಗೆಳೆವ ಭ್ರಾಂತಿಯು ಕೊಲ್ಲಲಿಲ್ಲ ॥ ಎಲ್ಲೆಲ್ಲಿಯು ತಾನೆತಾನಾಗಲಿಲ್ಲ । ಸಲ್ಲಲಿತಾನಂದದೊಳು ಕೂಡಲಿಲ್ಲ ॥ ಬರಿ ॥ ೭ ॥ ಪರಮು ನಾನೆಂಬರಿವನು ಮರೆತಿಲ್ಲ । ಮರವೇಗಾಶ್ರಯುವಾವುದದು ತೋರಲಿಲ್ಲ । ಪರವೆಂಬನುಡಿ ಬೆಂದುಬೂದಿಯಾಗಲಿಲ್ಲ । ಗುರುಶಂಕರ ನೊಳೈಕ್ಯ ತನಗಾಗಲಿಲ್ಲ ॥ ೮ ॥

೧೫

ಗುರುಪಾದದೊಳು ಮನ ಬೆರೆಯಲಿಲ್ಲ । ಜನ್ಮ ಹರಿಯಲಿಲ್ಲ । ಸ್ಥಿರ ಮುಕ್ತಿಸುಖವದು ದೊರೆಯಲಿಲ್ಲ । ಪಾಪಿ ಅರಿಯುಸಲ್ಲ ॥ ಪ ॥ ಜೀವಶಿವರಿಗೆ ಭೇದಮಾಡಬೇಡ । ಅದ ನೋಡಬೇಡ । ಭಾವಿಸಿ ಕರ್ಮದೊಳು ಕೂಡಬ್ಯಾಡ । ಓಡ್ಯಾಡಬೇಡ ॥ ೧ ॥ ಎರಡೆಂಬ ಭ್ರಾಂತಿಯು ಪೋಗಲಿಲ್ಲ । ಜನ್ಮ ನೀಗಲಿಲ್ಲ । ಗುರುಪಾದಸೇವೆ ಕೊನೆಸಾಗಲಿಲ್ಲ । ಬ್ರಹ್ಮನಾಗಲಿಲ್ಲ ॥ ೨ ॥ ತನ್ನ ಮರತು ತನುವತೊಳೆದರೇನು । ಬೂದಿ ಬೊಳೆದರೇನು । ಭಿನ್ನೀಶಿಗೈದ ಧ್ಯಾನ ಬಲ್ಲರೇನು । ವೇದ ಕಲ್ತರೇನು ॥ ೩ ॥ ರೂಪುನಾಮ ಬಿಟ್ಟಮೇಲೆ ಕೋಪವಿಲ್ಲ । ಪುಣ್ಯಪಾಪವಿಲ್ಲ । ಆ ಪರಬ್ರಹ್ಮನೊಳು ತಾಪವಿಲ್ಲ । ಅಧ್ಯಾರೋಪವಿಲ್ಲ ॥ ೪ ॥ ಸತ್ಯವರಿತಮೇಲೆ ನೀತಿಯಿಲ್ಲ । ಕುಲಜಾತಿಯಿಲ್ಲ । ಮಿಥ್ಯೆಯ ಕಳೆದಮೇಲೆ ರೀತಿಯಿಲ್ಲ । ಲೋಕಭೀತಿಯಿಲ್ಲ ॥ ೫ ॥ ತಾನಾರು ಯೆಂಬುದ ತಿಳಿಯಬೇಕು । ಭೇದವಳಿಯಬೇಕು । ನಾನಾತತ್ವ ಭಾವನುಳಿಯು ಬೇಕು । ಜನ್ಮ ಕಳಿಯಬೇಕು ॥೬॥ ಜ್ಞಾನವಿಲ್ಲದ ಬರಿಮೌನವ್ಯಾಕೆ। ಜಪಧ್ಯಾನ ವೇಕೆ । ತಾನೇತಾನಾದಮೇಲೆ ಮಾನಬೇಕೆ । ಗಂಗಾಸ್ನಾನಬೇಕೆ ॥೭॥ ಅಂತಸಿಲ್ಲದ ಮೇಲೆ ಚಿಂತೆಯಿಲ್ಲ । ಬೇರೆ ಶಾಂತಿಯಿಲ್ಲ । ಭ್ರಾಂತಿಯುಕಳೆದಮೇಲೆ ಪಂಥವಿಲ್ಲ। ತನ್ನಂತೆಯಿಲ್ಲ ॥ ೮ ॥ ಲಿಂಗ ತಾನಾದಮೇಲೆ ಭಂಗವಿಲ್ಲ । ಪಾಪ ಸಂಗವಿಲ್ಲ । ಅಂಗವ ಕಳೆದಮೇಲೆ ರಂಗಸಿಲ್ಲ । ನರಸಿಂಗನಿಲ್ಲ ॥ ೯ ॥ ಸಂಶಯುವಳಿಯೆ ದೇಹಬುದ್ಧಿಯಿಲ್ಲ । ಜಗದಸುದ್ದಿಯಿಲ್ಲ । ಸಂಸಾರದೊಳಗವನಿದ್ದುಯಿಲ್ಲ । ಮುಂದೆ ಬದ್ಧನಲ್ಲ ॥ ೧೦ ॥ ಗುರುಶಂಕರಾರ್ಯನ ಚರಣದಲ್ಲಿ ಶಿರವನಿರಿಸಿ ದಲ್ಲಿ । ಮರಳಿ ಜನ್ಮಸನೀ ಧರಣಿಯಲ್ಲಿ । ಬೆರೆವ ಪರಮನಲ್ಲಿ ॥ ೧೧ ॥

೧೬

ಸಾರುತೀದೆ ಶೃತಿ ಸಾರುತೀದೆಲ್ಲ । ಪರಮಾರ್ಥಜ್ಞಾನವಿಲ್ಲದೆ ನೂರು ಸಾವಿರ ದೇಹದೊಳಗತಿ ಘೋರತಪದಿಂ ತಪ್ತನಾದರು । ತೋರುದಾತಾನಂದ ವೆಂದು ಸಾರುತೀದೆ ॥ಪ॥ ತನ್ನನಿಜವನು ತಿಳಿಯಲಾರದೆ ಭಿನ್ನಭಾವನೆಯಿಂದ । ಕಲ್ಮರಮಣ್ಣು ಬೊಂಬೆಗಳನುಪೂಜಿಸೆ । ಜನ್ಮಬಾಧೆಯು ತೊಲಗಳೆಂದು ಸಾರುತೀದೆ ॥ ಓದಿವೇದವಜೀವಪರಮರ ಭೇದವಳಿಯದ ಮನುಜ ಧರೆಯೊಳು । ವಿರದಭಾರವಪೊತ್ತು ತಿರುಗುವ ಮಾದಿಗರ ಮನೆ ಕತ್ತೆಯೆಂದು ಸಾರುತೀದೆ ॥ ೨ ॥ ಜಾತಿನೀತಿಗಳಿಲ್ಲದಾತ್ಮಗೆ । ಜಾತಿಯನು ಕಲ್ಪಿಸುತ ಕರ್ಮದ ಮಾತನಾಡುವ ನರನೆ । ಕಾಲನ ದೂತಪಾಶಕೆ ಬದ್ಧನೆಂದು ಸಾರುತೀದೆ ॥ ೩ ॥ ಕಂದ ಮೂಲವತಿಂದು । ನದಿಯೊಳುಮಿಂದು । ಬೂದಿಯಧರಿಸಿ । ಪಿಟಿಪಿಟಿ । ಯೆಂದು ಮಂತ್ರವಜಪಿಸಿದರು ಭವಬಂಧವೆಂದಿಗು ಹರಿಯದೆಂದು ಸಾರುತೀದೆ ॥ ೪ ॥ ತತ್ವಮಸಿವಾಕ್ಯಾರ್ಥದೊಳಗಿನ ತತ್ವವರಿಯದೆ ಶಂಭು ಪೂಜೆಯು । ಹತ್ತುಸಾವಿರ ವರ್ಷಗೈದರಂ । ಮೃತ್ಯುವೆಂದಿಗು ತಪ್ಪದೆಂದು ಸಾರುತೀದೆ ॥ ೫ ॥ ತನುವೆ ತಾನೆಂದರಿತು ತನ್ನೊಳು ತನುವಿಗುಸುರಿದ ಜಾತಿಕರ್ಮವ । ನೆನೆಸಿ ಕರ್ಮಾಗ್ನಿಯಲಿಬೇಯುವ । ಮನುಜನಿಗೆ ಭವತೊಲಗ ದೆಂದು ಸಾರುತೀದೆ ॥ ೬ ॥ ನಾನು ನೀನದಿದೆಂಬಭಾವಗ । ಳೇನು ತೋರದ ಸಚ್ಚಿದಾನಂದನುಭವಸುಜ್ಞಾನ ತಳೆದಿಹ ಮಾನವನೆ ಪರಮಾತ್ಮನೆಂದು ಸಾರುತೀದೆ ॥ ೭ ॥ ಸತ್ಯವೆಂದುಸುರುತ್ತ ಕರ್ಮಕೆ ಭೃತ್ಯರಾಗಿಹ ಮೂಢ ಮನುಜರು ಸತ್ತುಜನಿಸುತ್ತಿರುವರೆಂದು ಸಾರುತೀದೆ ॥ ೮ ॥ ನಾರಿವಲಿದೊಡ ಪತಿಯುಮನಕನು। ಸಾರವಾಗಿರುತಿಹಳು ಮುನಿದೊಡೆ । ಮಾರಿಸುವಳವನೊಡ ನದರಿಂ ನಾರಿಯೇ । ಹಿರಿಮಾರಿಯೆಂದು ಸಾರುತೀದೆ ॥ ೯ ॥ ಸಾಯುವರ ದುಃಖಾಗ್ನಿಯಲಿ ಕಡುಬೇಯುವರ ನೋಡುತ್ತ ಎನಗೀ ಕಾಯುಸುಸ್ಥಿರವೆಂದು ನಂಬಿದ । ನಾಯಿಗುಂಟೆಸೌಖ್ಯವೆಂದು ಸಾರುತೀದೆ ॥ ೧೦ ॥ ಬಾಧೆಗೊಳಿಸುತ ತನುವ ಸಮ್ಯಗ್ಬೋಧೆಯಿಲ್ಲದೆ ಬಹುವ್ರತಂಗಳ । ಸಾಧಿಸಿದರದರಿಂದಲೀ ಭವಬಾಧೆಯೆಂದಿಗು ತೊಲಗದೆಂದು ಸಾರುತೀದೆ॥೧೧॥ಎಷ್ಟುದಿನ ಧರೆಯೊಳಗೆ ಬಾಳ್ದರು ನಷ್ಟವಾಗದೆ ನಿಲ್ಲದೀತನು । ಭ್ರಷ್ಟರಿದನರಿತರಿತು ತತ್ವವಬಿಟ್ಟು ಬರಿದೇ ಕೆಟ್ಟರೆಂದು ಸಾರುತೀದೆ ॥ ೧೨ ॥ ಸ್ವರ್ಗಭೋಗವಬಯಸಿ ನಿರ್ಮಲ

ನಿರ್ಗುಣಾದ್ವಯವಸ್ತುವನು ಹರಿಗೆ ಭಿನ್ನಾವಮಾದಿಗಳ । ಪೂಜಿಸುವರಿಗಪವರ್ಗ ವೆಂದಿಗು ದೊರೆಯದೆಂದು ಸಾರುತೀದೆ ॥ ೧೩ ॥ ಪರಮ ಸದ್ಗುರು ಶಂಕರಾರ್‍ಯನ। ಚರಣಕಮಲವಪಿಡಿಗು ತತ್ವವನರಿತು ಬ್ರಹ್ಮಾನಂದದೊಳಗಿಹ । ನರನೆ ಸಾಕ್ಷಾಧೀಶನೆಂದು ಸಾರುತೀದೆ ಶೃತಿ ॥ ೧೪ ॥

## ೧೭

ಶಿವಜೀವರುಯೆಂದೆರಡಿಲ್ಲ । ಪರಶಿವಮಯವೇ ಈ ಜಗವೆಲ್ಲ ॥ ಭವ ಕಾನನ ಶನದಹಿಸುವ ಮಂತ್ರವ । ಭುವಡಿಗುರುಪುತ್ರನೇ ಬಲ್ಲ ॥ ಪ ॥ ದಾನವ ಮಾಡಿದರೇನುಂಟು ಬರಿ । ಮೌನದೊಳಿರ್ದಡೆ ಏನುಂಟು । ಜ್ಞಾನದಿ ವಸ್ತುವ ನರಿತೊಡೆಸಾಕು । ಮಾನಕೆಶಿಲುಕಿದ ಸುಖಮುಂಟು ॥ ಶಿವಜೀವರು ॥ ೧ ॥ ನದಿಯೊಳು ಮುಳುಗಿದರೇನುಂಟು । ಬಳಿಕದರಿಂನಡುಗುವ ಛಳಿಯುಂಟು । ಸದಮಳವಸ್ತುವೆ ತಾನೆಂದರಿತೊ ಅದು ನಿತ್ಯಾನಂದದಗಂಟು ॥ ಶಿವ ಜೀವರು ॥ ೨ ॥ ವೇದದಳೋದಿದರಲ್ಲೇನು ಬಿಳಿಬೂದಿಯ ಬೊಳೆದರು ಯಮಬಿಡನು ॥ ಭೇದವು ತೋರದೆ ವಿಮಲಜ್ಞಾನವ ಸಾಧಿಸಿದರೆ ಶಿವನಾಗು ವನು । ಶಿವಜೀವರು ॥ ೩ ॥ ಉತ್ತಮಕರ್ಮವಗೈದವರು । ಕೇಳ್ ಮತ್ತೀಧರಣಿಗೆ ಬರುತಿಹರು । ತತ್ವದ ಮರ್ಮವನರಿತಿಹಧೀರರು । ನಿತ್ಯಾನಂದದಿಬೆರೆಯುವರು । ಶಿವಜೀವರು ॥ ೪ ॥ ದೇಶವ ಸುತ್ತಿದರೇನಿಲ್ಲ । ಭವಕಾಶಿಯೊಳಗಿದ್ದರು ಬಿಡದಲ್ಲ ॥ ಈ ಸಕಲವು ಪುಸಿಯೆಂದರಿತೊಡೆ ಜಗದೀಶನೇ ತಾನಾಗುವನಲ್ಲ ॥ ಶಿವಜೀವರು ॥ ೫ ॥ ನಂದನರಿಂದಲು ಭವಕೆಡದು । ಸಂಧ್ಯಾವಂದನೆ ನಿಜ ಮುಕ್ತಿಯ ಕೊಡದು । ಕುಂದದೆ ಶಿವತಾನೆಂದರಿತೊಡೆ ಆನಂದವು ಬ್ಯಾಡೆಂದರು ಬಿಡದು ॥ ಶಿವಜೀವರು ॥ ೬ ॥ ಉರುತರ ಕರ್ಮವಗೈದವರು ಕೇಳ್ ಪರಿಪರಿ ಯಜ್ಞದದೀಕ್ಷಿತರು। ಮರವೆಯು ತೋರದೆ ನಿಜಸುಖದೊಳಗಿಹ। ಗುರುಪುತ್ರನ ಪದಕಿಂಕರರು ॥ ಶಿವಜೀವರು ॥ ೭ ॥ ಘಂಟೆಯಬಡಿದರು ಗುಡಿಯಲಿ । ಯಮ ಭಂಟರು ಬೇರೆ ಬಿಡರಿಲ್ಲಿ । ಕಂಟಕವೆನಿಸಿದ ಮಾಯೆಯ ಕಳೆದರೆ ಗಂಟಾ ಗುವದದು ಪರದಲ್ಲಿ ॥ ಶಿವಜೀವರು ॥ ೮ ॥ ಎರಡೆಂಬುವನಿಗೆ ಕಡೆಯಿಲ್ಲ । ಈ ಧರಣಿಗೆ ಬರವುದು ಬಿಡದಲ್ಲ । ಗುರುಶಂಕರನಡಿಗಳ ಸ್ಮರಿಸಿದವರಿಗೆ ಮರಳೀ ಸಂಸ್ಕೃತಭಯುವಿಲ್ಲ ॥ ಶಿವಜೀವರು ॥ ೯ ॥

ಚಿನ್ಮಯಸುಖಸಾಗರ ನೀನಾಗಿ । ನಿನ್ನೊಳಗಿಹಮಾಯೆಗೆ ವಶನಾಗಿ ॥ ೧ ॥ ಅನ್ಯೋನ್ಯಾಧ್ಯಾಸಕೆ ಗುರಿಯಾಗಿ । ನಿನ್ನನಿಜತ್ವಕೆ ನೀಹೊರಗಾಗಿ ॥ ೨ ॥ ಅನ್ಯಾ
ಯದ ಕರ್ತೃತ್ವಕೆಪೋಗಿ । ನಿನ್ನಾನಂದದ ಘನತೆಯನೀಗಿ ॥ ೩ ॥ ಮುನ್ನಿಲ್ಲದ
ಬಂಧನಬರಲಾಗಿ । ಜನ್ಮದಕರ್ಮಿಯ ನಡೆಹಿತವಾಗಿ ॥ ೪ ॥ ಸನ್ಮಾರ್ಗವಿದೆನ್ನುತ
ಬೆರಗಾಗಿ । ವರ್ಣಾಶ್ರಮಧರ್ಮಗಳೊಂದಾಗಿ ॥ ೫ ॥ ನಿನ್ನೊಳ
ಸೇರಲು ವಿಧಳಧವಾಗಿ । ಪುಣ್ಯಕರ್ಮದೊಳು ಮತಿಯಂತಾಗಿ ॥ ೬ ॥
ಧನ್ಯನು ನಾನೆನ್ನುತ ಬೆರಗಾಗಿ । ಕಣ್ಣಿಲ್ಲದ ಕುರುಡನಿಗೆಣೆಯಾಗಿ ॥ ೭ ॥
ಮಣ್ಣಿನಬೊಂಬೆಗಳಿಗೆ ಶಿರಬಾಗಿ । ಇನ್ನೀಭಾರವ ಪೊತ್ತವನಾಗಿ ॥ ೮ ॥
ರನ್ನಮಯದ ಸ್ವರ್ಗಕೆ ನೀಪೋಗಿ । ಉನ್ನತನೆನಿಸುತ ಸುರರೊಳಗಾಗಿ ॥ ೯ ॥
ಕನ್ನೆಯರೊಲುಮೆಗೆ ಪರವಶನಾಗಿ । ಮನ್ನಣೆಯಿಂ ಭೋಗಿಸುತಿರಲಾಗಿ ॥೧೦ ॥
ಪುಣ್ಯದಫಲ ತೀರುತಬರಲಾಗಿ । ಇನ್ನದಕಿಂದ್ರನು ನಿರ್ದಯನಾಗಿ ॥ ೧೧ ॥
ನಿನ್ನಾದೇಹವ ಛೇದಿಸಲಾಗಿ । ಕಣ್ಣೀರಲಿ ಕೈತೊಳೆಯುವನಾಗಿ ॥ ೧೨ ॥
ಧರ್ಮಗಳೆತ್ತಿದೆ ಬಗೆಬಗೆಯಾಗಿ । ಚಿನ್ಮಯ ಗುರುಶಂಕರನ ಕೃಪೆನೀಗಿ ॥ ೧೩ ॥
ಬಿಡುಬಿಡು ದೇಹಾತ್ಮದ ಮತಿಯು ॥

## ೧೯

ನೋಡಬಾರದೇ ಬ್ರಹ್ಮವ ನೋಡಬಾರದೆ ॥ ಆಡುತ ಪಾಡುತ ಬೇಡು
ಕಾಡುತ । ಓಡುತ ನೋಡುತ ನಾಡೊಳು ಕೂಡಿದೆ ॥ ನೋಡ ॥ ಪಲ್ಲವಿ
ನಿರುಪಮ ನಿರ್ಗುಣ ನಿತ್ಯನಿರಾಶಯ ನಿರಘ ನಿರಂಜನ ನಿರವಧಿಯಾಗಿದೆ
॥ ನೋಡ ॥ ೧ ॥ ನಶ್ವರಮಾಯೆಯ । ವಶ್ಯವಗೊಳಿಸಿ ಮಹೇಶ್ವರನೆನಿಸು
ವಿಶ್ವವೆಯಾಗಿದೆ ॥ ನೋಡ ॥ ೨ ॥ ತಾಪಕೆಶಿಲುಕದೆ । ವ್ಯಾಪಿಸಿಗುಣದೊಳ
ಶ್ರೀಪತಿ ವಿಧಿಹರರೂಪವ ಧರಿಸಿದೆ ॥ ನೋಡ ॥ ೩ ॥ ಮಲಿನದ ವಿದ್ಯೆಯ
ಕಲಿತು ಮರೆತು ತನ್ನ । ತಿಳಿಯದೆ ತತ್ವವ ॥ ಕಳವಳಿಸುತಲಿದೆ ॥ ನೋಡ ॥ ೪
ತೇರಿ ತಾಮಸಿಯೊಳು । ಧಾರುಣಿಜಲಶಿಖಿಮಾರುತ ಗಗನಾ । ಕಾರ
ಧರಿಸಿದೆ ॥ ನೋಡ ॥ ೫ ॥ ಇಂದ್ರಾದ್ಯುತ್ತಮ । ಬಂಧುರ ತನುಗಳ ಹೊಂ

ಮನುಜರಿಂದ । ವಂದಿಸಿಕೊಳುತಿದೆ । ನೋಡ ॥ ೬ ॥ ವಿಧವಿಧಮರ್ತ್ಯಾದಧ್ಯಮದೇಹವಸೇರಿ । ಸದಮಳ ಪೂಜಾವಿಧಿಯನು ಪಿಡಿದಿದೆ ॥ ನೋಡ ॥ ೭ ॥ ನಿಜದೊಳಗಿಲ್ಲದ ವೃಜಿನವಕಲ್ಪಿಸಿ । ಅಜಹರಿರುದ್ರರ । ಭಜಿಸುತ ಕೂತಿದೆ ॥ ನೋಡ ॥ ೮ ॥ ದಾಸನೆನಿಸಿ ಸನ್ಯಾಸಿಯೆನಿಸಿ । ಪರದೇಶಿಯೆನಿಸುತೀ । ವೇಷವ ಧರಿಸಿದೆ ॥ ನೋಡ ॥ ೯ ॥ ತಾತ ತರುಣಿ ತನುಜಾತ । ಮಾತುಳರೆಂಬೀಮಾತುಗಳಿಂ । ವಿಪರೀತಭಾವದೊಳಿದೆ ॥ ನೋಡ ॥ ೧೦ ॥ ಬೆರತು ಕರುಣದೊಳಗರಿಯದ ಮೂಢನ । ಪರಿಯೊಳು ಸುಮ್ಮನೆ । ಶರೀರದೊಳಡಗಿದೆ ॥ ನೋಡ ॥ ೧೧ ॥ ವಿದ್ಯಾವಿದ್ಯೋಪಾಧಿಯ ಕಳೆದರೆ । ಶುದ್ಧ ಚಿದಾನಂ । ದಾದ್ವಯವೆನಿಸಿದೆ ॥ ನೋಡ ॥ ೧೨ ॥ ಕುಂಭಿನಿಕೋಟಿಯೊಳೆಂಬಿಲ್ಲದೆ । ತಾನಂಬರದಂದದಿ । ತುಂಬಿತುಳುಕುತಿದೆ ॥ ನೋಡ ॥ ೧೩ ॥ ಗುರುಶಂಕರನೊಳು ಬೆರಿಯದ ಮನುಜರಿ । ಗರಿಯದೆಪರಿಯೊಳು । ಮರೆಯೊಳು ಕೂತಿದೆ । ನೋಡಬಾರದೆ ಬ್ರಹ್ಮವ ॥ ೧೪ ॥

## ೨೦

ತನ್ನ ತಾ ತಿಳಿಯಬೇಕು । ಕೇಳದರಿಂದೀ ॥ ಜನ್ಮವ ಕಳಿಯಬೇಕು । ಮುನ್ನಿರ್ದಶಿವಜೀವ । ಭಿನ್ನತ್ವವಳಿದು ಮಹೋನ್ನತಾನಂದರಸ । ಚಿನ್ಮಯ ಭಾವದಿ ॥ ತನ್ನ ॥ ಪ ॥ ಮರಣಜನ್ಮಂಗಳಲ್ಲಿ । ಜಾಗರಸ್ವಪ್ನ ಸುಷ್ಪ್ತಿ ಮೂರ್ಛಾವಸ್ಥೆಯೊಳು । ಅರಿಯೆ ನಾನರಿಯುವೆ । ನರಿತೆನೆಂಬೆಡೆಯಲ್ಲಿ । ಪರದಿನಮಾಸ ಸಂವತ್ಸರ ಕಲ್ಪಾದಿಗಳಲ್ಲಿ ॥ ತನ್ನ ॥ ೧ ॥ ಘನತಿಮಿರದಿ ಕುಳಿತು । ಮುಸುಕಿಟ್ಟು ಕಣ್ಣನುಮುಚ್ಚತೊಳಬೆರತು । ಕನಸಿನ ಪರಿಯೊಳು । ಮನಸಿನ ಭಾವದಿ । ಜನಿಸಿ ತೋರುವ । ಜಗತ್ತಿನ ಕೋರ್ಕೆಕಾಲದಿ ॥ ತನ್ನ ॥ ॥ ೨ ॥ ಮನದೊಳು ವಿಧಿ ಸೇರಲು । ಮಾನಸವನು ದಿನವಿಷಯದಿ ಕೂಡಲು । ಧನಧಾನ್ಯವನಿತೆವಾಹನ । ವಸ್ತ್ರಾಭರಣಂಗಳನು ಭವದಿಂದ । ಸಂಜನಿಸುವ ಸುಖದೊಳು ॥ ತನ್ನ ॥ ೩ ॥ ತದಿದಮೆನಿಸಿಕೊಳುತ । ನಾನಾವಿಧ ವಸ್ತುಗಳ ನೋಡುತ । ಇದು ಜಗವಿದು ರೂಪವಿದು । ದೀಪವಿದು ನೇತ್ರವಿದು । ಬುದ್ಧಿಯುಂದ್ಧಿತು । ವಿಧಿಸುವ ನುಡಿಯೊಳು ॥ ತನ್ನ ॥ ೪ ॥ ಮತಿಯೋಳ್ ಸತ್ವವು ಕೂಡಲು । ಸತ್ಕರ್ಮಸಂತತಿಗಳಧಿಕವಾಗಲು । ಅತಿಭಕ್ತಿಯೊಳು ಗೌರೀ । ಪತಿ

ಪದಗಳ ಪೂಜಿಸುತ । ನಮಿಸುತ ನಿಂದು ನುತಿಸುವ ಕಾಲಡಿ ॥ ತನ್ನ ॥ ೫ । ನಿರುತವೀಬುದ್ಧಿಯೊಳು ತಾಮಸಗುಣ । ಕರಿಕೊಂಡು ನೆಲೆಗೊಳಲು । ಅರಿವರ್ಗದಿಂದಸು । ಸರಸಿ ಜನಿಸುವ ದುರಿತ ಕರ್ಮಗಳು । ಗೋಚರಿಸುವ ಸಮಯದಿ ॥ ತನ್ನ ॥ ೬ ॥ ಪರಿಯಾದೀ ಪ್ರಾರಬ್ಧವ ಮೀರದೆ । ನಾನಾ ಪರಿಯೊಳು ಕುಣಿದಾಡುವ । ಕರಣ ಧರ್ಮಂಗಳನರಿತಲ್ಲಿ ಬೆರೆಯದೆ । ಗುರು ಶಂಕರಾರ್ಯನೋಳ್ । ಬೆರದೇಕಮಯನಾಗಿ ॥ ತನ್ನ ತಾ ತಿಳಿಯಬೇಕು । ಕೇಳದರಿಂದೀ । ಜನ್ಮವ ಕಳಿಯಬೇಕು ॥ ೭ ॥

೨೧

ತನ್ನ ತಿಳಿದೊಡವಯೋಗಿ । ತಾನೇ ತನ್ನ ಮೂಲವ ಕಾಣದವ ಜನ್ಮರೋಗಿ । ಯಂದಿಗೂ ಜನ್ಮರೋಗಿ । ತನ್ನ ತಿಳಿದೊಡವ ಯೋಗಿ ॥ ಪ ॥ ಕರವಿದು ಕೊಡುವದಾನದಲಿ । ಮತ್ತೆ ಶಿರವಿದು ಶಿವನಿಗೊಂದಿಸುವ ಕಾಲದಲ್ಲಿ। ಚರಣದ ತೀರ್ಥಯಾತ್ರೆಯಲಿ ಬಾಯ । ತೆರೆದು ಶಿವನ ನುತಿಸುವ ಸಮಯದಲ್ಲಿ । ತನ್ನ ತಿಳಿದೊಡವ ಯೋಗಿ ॥ ೧ ॥ ನಾನಾಚಿತ್ರಗಳ ನೋಟದಲಿ ಬಿಳಿಕೀವೀಣಾದಿ ಗಾನಧ್ವನಿಯ ಕೇಳುವಲ್ಲಿ । ನಾನಾಗಂಧವ ಮೂಸುವಲ್ಲಿ । ಪಳ್ಳೀ ಜೇನುಸಕ್ಕರೆಭಕ್ಷ್ಯಂಗಳ ರುಚಿಯಲ್ಲಿ । ತನ್ನ ತಿಳಿದೊಡವ ಯೋಗಿ ॥೨॥ ಪಂದಾಗಿ ನಿಶ್ಚೈಸುವಲ್ಲಿ ಕಂಡು ತಿಂದು ಕೇಳಿದ ವಸ್ತುಗಳ ಬಯಸುವಲ್ಲಿ । ಹಿಂದೆ ನಡೆದ ಸ್ಮೃತಿಯು ತನ್ನ ಮುಂದೆ ನಿಲ್ಲುವರಿಲ್ಲೆಂಬುವ ನುಡಿಯಲ್ಲಿ ॥ ತನ್ನ ತಿಳಿದೊಡವ ಯೋಗಿ ॥ ೩ ॥ ಕುಜನದುಷ್ಕರ್ಮಕೂಟದಲಿ । ತನ್ನ ದ್ವಿಜನೆಂದು ಜನರು ಪೂಜಿಸುವ ಕಾಲದಲ್ಲಿ । ರುಜೆಯಿಂದ ತಪಿಸುವೆಡೆಯಲ್ಲಿ । ಕೂಡಿ ಸುಜನರೊಡನೆ । ಮಾಡುವ ಖಿಳಯಜ್ಞದಲ್ಲಿ ॥ ತನ್ನ ತಿಳಿದೊಡವ ಯೋಗಿ ॥ ೪ ॥ ಪರವಿಹವೆಂಬುದನೀಗಿ । ಪುಣ್ಯದುರಿತ ಶಬ್ದಂಗಳೆರಡು ಬೂದಿಯಾಗಿ । ಅರಿವಿನರೂಪವಾಗಿ । ನಮ್ಮ ಗುರುಶಂಕರಾರ್ಯನೊಳ್ಬೆರದೇಕನಾಗಿ ॥ ೫ ॥

೨೨

ಭಾನಭಾಸ್ಯವಿಧಾನವನರಿತೆ ಸಮ್ಯ । ಜ್ಞಾನಿಯೆ ಪರಶಿವನು ಸ್ನಾನಮೌನಧ್ಯಾನಯಜ್ಞವಿಧಾನ । ನುತಿಸಂಧಾನ ಜಪತಪ ಮೌನನಿಯಮಗಳೇನು

ತೋರದ । ನ್ರೂರಸುಖರಸ ಪಾನದೊಳಗಿಹ ॥ ಪ ॥ ವಂದರೊಳಗೈದಾಯಿ ತೆಂಬುತದು । ಶ್ರುತ್ಯುಕ್ತ ಗುರುಮುಖದಿಂದ ನಿಶ್ಚಲವಾಗಿ ತೋರಲದು ಮಧ್ಯಾತನೂಭವ । ನಂದದಲಿ ತದ್ಭಿನ್ನವನು ತಿಳಿದು ಪರಿಪೂರ್ಣಭಾವದಿ । ನಿಂದುವಾಸನೆ ಬೆಂದು । ಮಾಯೆಯಕೊಂದು । ಭೇದವತಿಂದು ಕರ್ಮಿಯು । ಹೊಂದಲಾಗದ್ದೆ ಮಂದ ಬ್ರಹ್ಮಾನಂದ ಕಡಲೊಳುಮಿಂದುಸುಖಿಸುವ । ಭಾನ ಭಾಸ್ಯವಿಧಾನವನರಿತ । ಸಮ್ಯಜ್ಞಾನಿಯೆ ಪರಶಿವನು ॥ ೧ ॥ ಕೋಶತದ್ಧರ್ಮಂ ಗಳನು ತಿಳಿದು । ನಿಜಭೋಧೆಯಿಂದಾ । ಕೋಶಗಳೊಂದೊಂದನೆರೆಕಳೆದು ತನ್ನೇತಿಯಿಂಪರಿಶೇಷಗೊಳಿಸಿದ ವಸ್ತುವನುಪಿಡಿದು । ತನ್ನಿರ್ಮಲತ್ವದಿ ಕ್ಲೇಶಪಂಚಕದೋಷಗಳನು । ಧ್ಯಾನವಮಾಡದೆ ಶೇಷವಮಾಯಾ । ಪಾಶಬಂಧ ವಿನಾಶದಿಂ ಜಗದೀಶನಾಗಿ । ಸಂತೋಷದೊಳಗಿಹ॥ ಭಾನಭ್ಯಾಸವಿಧಾನವನರಿತ ಸಮ್ಯಜ್ಞಾನಿಯೆ ಪರಶಿವನು ॥ ೨ ॥ ಕ್ರೂರಕರ್ಮವಿದ್ವಾನಗಳುಪೋಗಿ । ಗುರುಶಂಕರಾರ್ಯನಸೇರಿ । ಭೇದಾಭೇದಗಳ ನೀಗಿ । ನಾನಾವಿಚಿತ್ರದಿ ತೊರುವೀ ಜಗವೆಲ್ಲದೃಕ್ಕಾಗಿ । ಪ್ರಾರಬ್ಧದೊಡನೆಯು । ಹೋರಿ ನಿಜಜಯಭೇರಿನಾದವ । ಬೀರಿ ಶಂಕೆಯುಮಾರಿ । ವಿಧಿಯನು ಹಾರಿ । ಕರ್ಮವತೂರಿ । ತತ್ವದಿಸೇರಿ । ನಿಜಸುಖತೋರಿ ಬೆಳಗುವ ॥ ಭಾನಭಾಸ್ಯವಿಧಾನವರಿತ । ಸಮ್ಯಜ್ಞಾನಿಯೆ ಪರಶಿವನು ॥ ೩ ॥

೨೩

ಜ್ಞಾನವೊಂದೆಸಾಕು ಮುಕ್ತಿಗೆ । ಮಿಕ್ಕಾದ ಮೌನಧ್ಯಾನನೇಮುಗಳೆಲ್ಲ ಭುಕ್ತಿಗೇ ॥ ಪ ॥ ನಾನು ನನ್ನದೆಂಬ ಜಗದಭಿ । ಮಾನವಿಲ್ಲದೆ ನಿಖಿಲಬಂಧನ। ಮಾನಸದ ಕಲ್ಪಿತವೆ ಸರಿಯುನು । ಮಾನವಿನ್ನಿದಕಿಲ್ಲದೆಂಬುವ ॥ ಜ್ಞಾನವೊಂದೆ ಸಾಕು ಮುಕ್ತಿಗೆ ॥ ಅ ॥ ಶುಕ್ತಿಯಲಿ ರಜತತ್ವ ತೋರ್ಪಂತೆ । ಈ ಜಗವು ಮಾಯಾಶಕ್ತಿಯಿಂ । ಕಾಣುವುದು ನಿಜದಂತೆ । ಯುಕ್ತಿಯಿಂದಿನಾಮರೂಪ । ವ್ಯಕ್ತಿಜಾತಕವಕಳೆದು । ವ್ಯಕ್ತಾವ್ಯಕ್ತಲಕ್ಷಣ ಶಕ್ತಿಕಾರ್ಯೋನ್ಮುಕ್ತನೇ ನಾನೆಂಬ। ಸಮ್ಯಜ್ಞಾನವೊಂದೇ ಸಾಕು ಮುಕ್ತಿಗೆ ॥ ೧ ॥ ಮೃತ್ತಿನಲಿ ಕಲ್ಪಿಸಿದವಸ್ತುಗಳು। ಬೇರೆನಿಸಿ ತೋರದೆ । ಮೃತ್ತೆಯಾಗಿಯೆ ಬೆಳಗುವಂದದಲಿ ॥ ತತ್ವದಿಂದಾ ಶ್ರಯವ ಕಲ್ಪಿತ । ವೊತ್ತದಿಂ ನೆರೆಕಳೆಯೆ ಭ್ರಮೆಯಿಂ । ಚಿತ್ತಿನಲಿಕಲ್ಪಿಸಿದ ಜಗವಿದು । ಚಿತ್ತೆಯಾಗುವದೆಂಬ ಪೂರ್ಣ । ಜ್ಞಾನವೊಂದೆ ಸಾಕು

ಮುಕ್ತಿಗೆ ॥ ೨ ॥ ಪರಮಸದ್ಗುರು ಶಂಕರಾರ್ಯನಲಿ । ಮನವಿಟ್ಟು ತತ್ವವ । ನರಿತು ನಿಜ ಗುರುಚರಣ ಕರಣವಲಿ । ನಿರುಪಮಿತ ನಿರ್ಗುಣ ನಿರಂಜನ । ನಿರಘನಿರ್ದ್ವಯ ನಿತ್ಯನಿರ್ಮಲ । ನಿರತಧಿಕ ನಿರ್ಮಾಯ ನಿಷ್ಕ್ರಿಯ । ನಿರತಿಶಯನಾನೆಂಬ ದಿವ್ಯ । ಜ್ಞಾನವೊಂದೆ ಸಾಕು ಮುಕ್ತಿಗೆ । ಮಿಕ್ಕಾದ ಮೌನ । ಧ್ಯಾನ್ಯನೇಮಗಳಿಲ್ಲ ಭುಕ್ತಿಗೆ ॥ ೨ ॥

೨೪

ಸುಮ್ಮನಾಗದು ನಿಜಾನಂದ ಬಾಯ । ಬೊಮ್ಮವ ನುಡಿಯೆ ತಪ್ಪದು ಭವಬಂಧ । ಕಾಮಾದಿಗಳನೆಲ್ಲ ಬಿಡದೆ । ಪುಸಿನಾಮರೂಪುಗಳ ಭ್ರಾಂತಿಯ ಮೂಲಕೆಡದೆ । ತಾಮಸವೃತ್ತಿಯ ಸುಡದೆ । ಸರ್ವಂ ಪ್ರೇಮಸ್ವರೂಪವೆಂಬುವ ಭಾವಬರದೇ ॥ ಸುಮ್ಮನಾಗದು ನಿಜಾನಂದ ॥ ೧ ॥ ನಾನುನೀನೆಂಬುದ ನುಳಿದು । ಧ್ಯಾತೃಧ್ಯಾನಧ್ಯೇಯಗಳೆಂಬ ತ್ರಿಪುಟಿಯಕಳೆದು । ನಾನಾತ್ವಭಾವವ ತೊರೆದು । ಸಮ್ಯಜ್ಞಾನದಿಂ ಶಿವನೇ ತಾನಾಗದೆ ಬರಿದೆ ॥ ೨ ॥ ಹಿತಶತೃಗಳ ಸಮವೆನಿಸಿ । ನಿಂದಾಸ್ತುತಿಗಳೆರಡನು ತಾನೊಂದಾಗಿ ಗಣಿಸಿ । ಮತಿಗೆ ಧೃಢತೆ ಯಳವಡಿಸಿ । ಭೇದಗತಿಯಮರಸುವ ಸುಜ್ಞಾನಮುದಿಸದೆ ॥ ಸುಮ್ಮನಾಗದು ನಿಜಾನಂದ ॥ ೩ ॥ ಚನ್ನಾಗಿ ತಿಳಿದು ತತ್ವವನು । ಯಲ್ಲ । ತನ್ನಂತೆಭಾವಿಸಿ । ತೊರದುಕ್ರೋಧವನು । ಮುನ್ನಿರ್ದ ಭೇದಭಾವವನು ಬಿಟ್ಟು । ಹೊನ್ನಿನಂದದಿ ಶುದ್ಧನಾಗದೆ ಬರಿದೇ ॥ ಸುಮ್ಮನಾಗದು ನಿಜಾನಂದ ॥ ೪ ॥ ಕರಣತತ್ವಗಳ ತಿಳಿಯದೆ । ಕಾಯ ಕರಣಕಾರ್ಯಗಳೆನ್ನದೆಂಬುದು ಕೆಡದೇ । ಪರಜೀವಭೇದವಳಿ ಯದೆ ತಾನು । ಗುರುಶಂಕರಾರ್ಯನ ಪದದಿ ಬೆರೆಯದೇ ॥ ಸುಮ್ಮನಾಗದು ನಿಜಾನಂದ । ಬಾಯ ಬೊಮ್ಮವನುಡಿಯೆ ತಪ್ಪದು ಭವಬಂಧ ॥ ೫ ॥

೨೫

ಪರಮನು ನೀನಿನ್ನೊಳಗುಂದಿಪುದು । ಪರಿಕಿಸಲದೆ ಮಾಯೆಯು ಯೆನಿಸುವುದು । ಪರಮಾರ್ಥವನೆಲ್ಲವ ಮುಚ್ಚುವುದು । ಇವರು ಪರಮಾತ್ಮನ ನಿಲ್ಲೆನಿಸುವುದು । ಪರಿಪರಿಲೋಕವ ಕಲ್ಪಿಸುತಿಹುದು । ಸ್ಥಿರಕರ್ಮಿಗೆ ಕುಲಗುರು ವಾಗಿಹುದು । ಶರೀರವೇ ನಾನೆಂದೆನಿಸುತ್ತಿಹುದು । ಪರಮಸುಖದಾಶೆಯ

ಪುಟ್ಟಿಸುತಿಹುದು । ಗುರುವಿನಮಾರ್ಗವನದು ಮರಸುವುದು । ಕುರುಹಿಲ್ಲದ ಪಾಪವ ಹೊರಿಸುವುದು । ಪರಮಪಾಪಿಯು ನಾನೆಂದೆನಿಸುವದು । ಮರಶಿಲೆಗಳ ದೇವರ ಮಾಡುವುದು । ಶರಣಾಗಿರು ನೀನಿದಕೆನ್ನುವದು । ಗಿರಿಗುಹೆವನವಾಸವಗೈಸುವುದು । ಪರಿಪರಿ ತೀರ್ಥನದಿ ಮುಳುಗಿಸುತಿಹುದು । ಬರಿಜಾತಿಯ ಪಾಶದಿ ಬಿಗಿಯುವುದು । ವಿರಚಿಸಿ ಸ್ವರ್ಗವ ನೋಡೆನ್ನುವುದು । ಸುರಪಥವಿದರೊಳು ಸುಖಿಸೆನ್ನುವುದು । ಸಿರಿಯನುತೋರಿಸಿ ಕೊಲ್ಲುತಿಹುದು । ಉರುಸಂಸಾರಕೆ ಹೊಣೆಯಾಗಿಹುದು । ಮರದೊಡೆಯಲ್ಲೆಲ್ಲಿಯು ತಾನಿಹುದು । ಗುರುಶಂಕರಸುತನಿಗೆ । ಕಾಣಿಸದು । ಬಿಡುಬಿಡು ದೇಹಾತ್ಮದ ಮತಿಯ ॥

೨೬

ಸುಮ್ಮನಿರಲು ಮುಕ್ತನಹುದು । ಪರಬೊಮ್ಮವ ನಾನೆಂಬ ಮರ್ಮವ ತಿಳಿದು । ಸುಮ್ಮನಿರಲು ॥ ಪ ॥ ಹಮ್ಮಿನ ಮೂಲವಸುಟ್ಟು । ಕರ್ಮಸಮ್ಮತವಾದ ಹಾದಿಯನೆಲ್ಲಬಿಟ್ಟು । ಬೊಮ್ಮನ ನಿಜವಳವಟ್ಟು ಶಿವೋ । ಹಮ್ಮೆಂಬೊ ನಿಜಬೋಧೆ ಕವಚವತೊಟ್ಟು ॥೧॥ ಕೋಶಪಂಚಕಮರ್ಮ ತಿಳಿದು। ಮತ್ತಾಕೋಶಪಂಚಕದೊಳಗೊಂದೊಂದಕಳದು । ಈಶಜೀವರ ಭೇದವಳಿದು । ಜಗದೀಶನೆ ನಾನೆಂಬ ಮರ್ಮವತಿಳಿದು ॥ ಸುಮ್ಮನಿರಲು ಮುಕ್ತನಹುದು ॥೨॥ ಜಾತಿನೀತಿಯು ಭ್ರಾಂತಿಪೋಗಿ । ವಿಷಯಾತಿಶಯದ ಭೋಗಂಗಳನೆಲ್ಲನೀಗಿ । ಆತ್ಮಾನುಭವ ದೃಢವಾಗಿ ಸೆಲಸಿ । ಕಾತರಗೊಳದೆ ನಿಶ್ಚಲಚಿತ್ತನಾಗಿ ॥ ಸುಮ್ಮನಿರಲು ಮುಕ್ತನಹುದು ॥ ೩ ॥ ಲೋಕಾದಿವಾಸನೆಬಿಟ್ಟು । ಪರಲೋಕದಾಶೆಯ ಮೂಲವನು ಮೊದಲೆ ಸುಟ್ಟು । ಶೋಕಮೋಹಗಳೆಲ್ಲಕೆಟ್ಟು । ಸನ್ನಿರಾಕಾರ ಬ್ರಹ್ಮಭಾವನೆಯುಳವಟ್ಟು ॥ ಸುಮ್ಮನಿರಲು ಮುಕ್ತನಹುದು ॥೪॥ ಪರಮಾನಂದದ ತುದಿಗೇರಿ । ಮುನ್ನ ಶರೀರದೊಳಿರ್ದಭಿಮಾನವತೂರಿ । ಪರಿಪೂರ್ಣ ಭಾವನೆ ತೋರಿ । ನಮ್ಮ ಗುರುಶಂಕರಾರ್ಯನ ಪದದೊಳು ಸೇರಿ ॥ ಸುಮ್ಮನಿರಲು ಮುಕ್ತನಹುದು ॥ ೫ ॥

೨೭

ಬಿಡೀಬಿಡೀ ಭಯವಿನ್ಯಾತಕೆ ॥ ಪ ॥ ಪೊಡವಿಗೊಡೆಯನಾದ ಮೃಡನೊಳು ಬೆದರರಿ ॥ ಬಿಡೀಬಿಡೀ ಭಯವಿನ್ಯಾತಕೆ ॥ ಅ ॥ ವಡಲನು ದಂಡಿಸಿ ।

ಮಡಿಯೊಳು ಬಳಲುವ । ತೊಡಕಿನೋಳ್ ಶಿಲುಕದೆ । ದೃಢದಿಂ ಗುರುವರ ನಡಿಗಳ ಪಿಡಿದಿರಿ । ಬಿಡೀಬಿಡೀ ಭಯವಿನ್ಯಾತಕೆ ॥ ೧ ॥ ತನುವೆ ನಾನೆನ್ನುವ ಘನತರಾಜ್ಞಾನವ ಮನದಿಂ ಕಳಿಯುಲು । ನೆನೆಸಿನ ಜಗವಿದು ಕನಸಿನೊಳಾದುದು ॥ ಬಿಡೀಬಿಡೀ ಭಯವಿನ್ಯಾತಕೆ ॥ ೨ ॥ ಮಾಣದೆ ವಿಷಯವ ಕಾಣುತಬಯಸುವ । ಮಾನಸದ ಕ್ರಿಯೆಯೊಳು । ನಾನೆಂಬುವ ಅಭಿಮಾನವು ತೊಲಗಿತು ॥ ಬಿಡೀಬಿಡೀ ಭಯವಿನ್ಯಾತಕೆ ॥ ೩ ॥ ಕುಂದದೆ ಶಿವನೆ ತಾನೆಂದರಿತದರೊಳು ಸಂದೇಹಂತೊಲಗಲು । ಯೆಂದಿಗು ಕೆಡದಾನಂದವು ಲಭಿಸಿತು ॥ ಬಿಡೀಬಿಡೀ ಭಯವಿನ್ಯಾತಕೆ ॥ ೪ ॥ ನಿರುತ ಶಿವಾನಂದ ಪರಿಪರಿವಿಧದಿಂದ ಮರಿಯದೆಸ್ಮರಿಸುವ । ಗುರುಶಂಕರನೊಳು ಕರಣಗಳಡಗಿತು ॥ ಬಿಡೀಬಿಡೀ ಭಯವಿನ್ಯಾತಕೆ ॥ ೫ ॥

೨೮

ನೀರೆ ನೀತೋರೆ ನಾ ಕೋರುವವರನಾ ॥ ಪ ॥ ಮೂರುಗುಣಂಗಳ ಮೀರಿ ಬೆಳಗುವನ ॥ ಅ ॥ ರಚಿಸಿಯೆಲ್ಲವನು । ತಾ ಶುಚಿಯಾಗಿರುವನ ವರಿಸಲು ಶೃತಿಗನಿರ್ವಚನೀಯಪರನ ॥ ನೀರೆ ನೀತೋರೆ ನಾ ಕೋರುವ ವರನಾ ॥ ೧ ॥ ಮರಣಜನ್ಮಗಳೆಂಬೀ । ಶರೆಯಿಲ್ಲದವನ · ಕರಕಸಂಕಲ್ಪದಿಂ । ನರನೆನಿಸುವನ ॥ ನೀರೆ ॥ ೨ ॥ ಕಲತು ಕರ್ಮದೊಳು ನಿರ್ಮಲನಾಗಿರುವನ ತಿಳಿಯದೆ । ತತ್ವವ ಕಳವಳಿಸುವನ ॥ ನೀರೆ ನೀ ತೋರೆ ॥ ೩ ॥ ಪಿರಿದಾದ ಮಾಯೆಯ ಮುರಿದಿಕ್ಕಿದವನ । ಶರೀರನಾನೆಂದವತರಿಸಬಂದವನ ॥ ನೀರೆ ॥ ೪ ॥ ವಡಲಿನಬೆಡಗನುಪಿಡಿದು ಮಿಡುಕುವನ । ತಡೆ ಬಿಡುಗಡೆನುಡಿ । ನಡೆಯಿಲ್ಲದವನ ॥ ನೀರೆ ॥ ೫ ॥ ಅಂದಿಂದೆನ್ನದೆ । ತಾನೆಂದೆಂದೀಗಿರುವನ । ಕುಂದುತೋರದ ಪರಮಾನಂದ ಚಿದ್ಘನನ ॥ ನೀರೆ ನೀ ತೋರೆ ॥ ೬ ॥ ಕರಣಕಾರ್ಯಂಗಳನರಿವ ಸಾಕ್ಷಿಕನ । ಗುರುಶಂಕರಾರ್ಯನೋಳ್ ಬೆರೆದುಕೊಂಡಿಹನ ॥ ನೀರೆ ನೀ ತೋರೆ ನಾ ಕೋರುವರನಾ ॥ ೭ ॥

೨೯

ಆನಂದವನದೊಳಾಡುವನ್ಯಾರೆ ನೋಡುವೆ ತೋರೆ । ಬೇಡುವೆನೀರೆ ಆನಂದವನದೊಳಾಡುವನ್ಯಾರೇ ॥ ಪ ॥ ಮಾನಮೇಯಗಳಿಗೆ ಶಿಲುಕನಂತೆ । ಅಭಿಮಾನಾವ ಮಾನಗಳಿವನಂತೆ । ಜಗಧ್ಯಾನಾದಿಗಳಿಗೆ ಗೋಚರಿಸನಂತೆ ।

ಅವಧಾನಿಗಳಿಗೆ ಬಹುದರಸನಂತಮ್ಮ ಮ್ಮ॥ ಆನಂದವನದೊಳಾಡುವನ್ಯಾರೆ॥೧॥ ಮೂರುಕಾಲದೊಳು ತಾನಿರುವನಂತೆ। ತನ್ನ ಮೀರಿದವಸ್ತು ಬೇರಿಲ್ಲವಂತೆ। ಇಲ್ಲಿ ತೋರುವ ಜಗವೆಲ್ಲ ತಾನೆಯಂತೆ। ದೊಡ್ಡ ಮಾರಿಯು ಮುರಿದು ನುಂಗಿದ ನಂತೆ ಕಾಣಮ್ಮ ॥ ಆನಂದವನ ॥ ೨ ॥ ವಂದುಜಾತಿಯೊಳು ತಾಸೇರನಂತೆ। ತನ್ನ ಹಿಂದುಮುಂದರಿಯಾದೀಗಾದನಂತೆ। ಬಹುಮುಂದಿಗೊಬ್ಬನಿಗೆ ಕಾಣಿಸುವ ನಂತೆ। ತನ್ನಾನಂದವ ಕಂಡವರಿಲ್ಲವಂತಲ್ಲಮ್ಮ । ಆನಂದವನದೊಳಾಡುವನ್ಯಾರೆ ॥ ೩ ॥ ಕಾಶಿಯೊಳಗು ನೆಲಸಿರುವನಂತೆ। ಜಗಧೀಶರಿಗೆಲ್ಲ ನಿವಾಸನಂತೆ। ಮಾಯಾಪಾಶ ಕಳದರತಿಸುಲಭನಂತೆ। ದೇಹವಾಸನೆಗವ ಯಮಪಾಸ ನಂತಮ್ಮ ಮ್ಮ । ಆನಂದವನದೊಳಾಡುವನ್ಯಾರೆ ॥ ೪ ॥ ಐದುಸುತ್ತಿನದೊಂದು ಕೋಟೆಯಂತೆ। ಇಪ್ಪತ್ತೈದು ಕೀಲುಗಳಿಂದದಾಯಿತಂತೆ। ಹೊರಬೀದಿ ಬಾಗಿಲು ನಾಲ್ಕೈದುಂಟಂತೆ। ಅಲ್ಲಿ ಭೇದಿಸಿಬಂದು ಸೇರಿದನಂತೆ ನೋಡಮ್ಮ। ಆನಂದವನದೊಳಾ ॥೫॥ ಹಿಂದೆ ಗುರುಶಂಕರನೊಳ್ಬಂದಕಾಣೆ। ವಿದ್ಯಾನಂದನ ಪದದೊಳು ನಿಂದುಕಾಣೆ। ನಿಜಾನಂದಗುರುವಿನಕಂದಕಾಣೆ। ತನ್ನಾನಂದವರಿತ ಶಿವಾನಂದ ಕಾಣಮ್ಮ ಮ್ಮ। ಆನಂದವನದೊಳಾಡುವನ್ಯಾರೆ ॥ ೬ ॥

೩೦

ಬ್ಯಾಡವೋ ಯಂದೆಂದಿಗು ಬ್ಯಾಡವೋ। ನೋಡಿದೆಲ್ಲೊಂದೆಂಬದಾಗಿ ಶೃತಿಪಾಡುತಿಹುದು ದೃಢವಾಗಿ। ಲೋಕರೂಢಚಿದ್ರೂಪನೀನಾಗಿ। ಬರಿದೆ ನಾಡಿನೊಳಿರುತಿರ್ಪ। ಕಾಡಕಲ್ಲಿಗೆ ಕೈಯ್ಯಜೋಡಿಸಿ ಫಲಗಳ। ಬೇಡುವ ಬಾಧೆಯು ಬ್ಯಾಡವೋ ॥ ಯಂದೆಂದಿಗು ಬ್ಯಾಡವೋ ॥ ಪ ॥ ತಿಜೀವನಂಶಕೆ ಮನಕೊಡದೆ। ದೇಹದೊಳಗಿನ ತತ್ವವರಿಯದೆ। ದುಃಖದೊಳಗೆ ಶಿಲುಕಿ ನೀನು ಬರಿದೆ। ಅಹ ಛಳಿಗಾಳಿ ಮಳೆಯೊಳು ಮುಳುಗಿ। ನೀರೊಳು ಮೈಗೆ ಬೊಳದು ಬೂದಿಯನೆಲ್ಲ। ಬಳಲುವ ಬಾಧೆಯು ಬ್ಯಾಡವೋ ॥ ೧ ॥ ಧರೆಯ ತೀರ್ಥದೊಳೆಲ್ಲ ಮುಳುಗಿ। ನಾನಾಪರಿಯ ಕಲ್ಗಳಿಗೆಲ್ಲಯರಗಿ। ತನ್ನ ಮರತು ಕರ್ಮಗಳಲ್ಲಿ ಕೊರಗಿ। ನಿತ್ಯನಿರುಪಮ ವಸ್ತುವನರಿಯದೆ। ಭವಿಯುವರ ನರಕ ನಾಕಗಳಿಗೆ ॥ ತಿರುಗುವ ಬಾಧೆಯು ಬ್ಯಾಡವೋ ॥೨॥ ಅಲ್ಲುಂಟಲ್ಲಿಲ್ಲೆಂಬುದಿಲ್ಲ। ನೋಡಲಲೆಲ್ಲೆಲ್ಲು ತುಂಬಿಹನಲ್ಲ। ಶಿವನಿಲ್ಲದ ವಸ್ತುವೆಯಿಲ್ಲ। ಇಲ್ಲಿ ಯಳ್ಳು

ದರ್ಭೆಗಳ ಕೈಯಲ್ಲಿ ಪಿಡಿದು। ನೀರಚಲ್ಲಿದೊಡೇನದರಲ್ಲುಂಟೆ ಕೈವಲ್ಯ। ಬ್ಯಾಡವೋ ॥೩॥ ದೇಶಿಕನಂಘ್ರಿಪಿಡಿಯದೆ ಪಂಚಕೋಶಧರ್ಮಗಳ ಬೇರಿಡದೆ। ಗಜಧೀಶತಾನೆಂಬುದರಿಯದೇ। ಛಿ ಛೀ ಮಾಸಮಾಸದೊಳುಪವಾಸದಿ ಬಳಲುತ ದೇಶದೇಶವಸುತ್ತಿ ಘಾಶಿಯಾಗುವ ಬುದ್ಧಿ ಬ್ಯಾಡವೋ ॥ ೪ ॥ ಗುರು ಶಂಕರಾರ್ಯನಪದವ ಪಿಡಿದರಿತು ನಿನ್ನೊಳಗಿಹ ನಿಜವ ನೀನು ಬೆರಸದೆ। ಕ್ರಿಯದಿ ಮಾನಸವ। ನಿತ್ಯನಿರುಪಮ ವಸ್ತುವನರಿತು। ನಿಶ್ಚಿಂತೆಯೊಳಿರದೆ। ಕ್ಷೇತ್ರಗಳಿಗೆ ತಿರುಗುವ ಬಾಧೆಯು ಬ್ಯಾಡವೋ। ಯಂದೆಂದಿಗು ಬ್ಯಾಡವೋ ॥ ೫ ॥

೩೧

ಪರಿಣಯವು ಯನಗಾಯ್ತು। ಮರಣವಿಲ್ಲದವರನ ವರಿಸಿ। ನಾನಿತ್ಯ ಮುತ್ತೈದೆಯಾದೆನು। ಸಖಿಯೆ ಬಹುಪುಣ್ಯಫಲದಿ ॥ಪ॥ ಕೂಡಿ ನಾನಾಮತದ ವಾದಿಗಳು ಬಂದು ಬೇಡಿದರು ಪುತ್ರಿಯನುಕೊಡಿ ಯಮಗೆಯೆಂದು ॥ ೧ ॥ ಜಾತಿಕೊಟವೈಕ್ಯವಾಗುವುದನೋಡಿ। ಮಾತುಕೊಟ್ಟರು ಲಗ್ನ ನಿಶ್ಚಯ ಮಾಡಿ ॥೨॥ ಪರತತ್ವವೆಂತೆಂಬ ಯಣ್ಣೆಯನುಬೊಳದು। ದುರಿತಜಾಲಗಳೆಂಬ ಕೊಳೆಯಲ್ಲಕಳೆದು ॥ ೩ ॥ ಗುರುಭಕ್ತಿಯೆಂಬ ಸಂಕಲಿಕೆಯನು ಉಡಸಿ। ಕರುಣ ಶಾಂತಿಗಳೆಂಬ ಕುಪ್ಪಸವತೊಡಿಸಿ ॥ ೪ ॥ ಪರಮಾತ್ಮವೆಂಬ ಸೂತ್ರವನು ಅನುಸರಿಸಿ। ಸ್ಥಿರಬುದ್ಧಿಯೆಂಬ ಬಾಸಿಂಗವನು ಧರಿಸಿ ॥ ಪೂರ್ವಸುಕೃತಗಳೆಂಬ ತರುಣಿಯರು। ಮುದದಿ ಸೇರಿಸಿದರೆನ್ನನದ್ವೈತಮಂಟಪದಿ ॥೬॥ ಗುರುದೀಕ್ಷೆ ಯಂಬಗ್ನಿಕುಂಡವನೆಯಿಟ್ಟು। ಮರವೆಯೆಂಬ ಸಮಿತ್ತುಗಳನೆಲ್ಲ ಸುಟ್ಟು ॥೭॥ ಪರಮಪಾಪಿಯು ಕಣ್ಗೆ ಗೋಚರಿಸದಿರುವ। ಕರದಿ ಕಟ್ಟಿದ ಸೋಹಮೆಂಬ ಕಂಕಣವ। ಮತ್ತೆ ಸುಮುಹೂರ್ತದಲಿ ಕಟ್ಟಿದನುಗಳದಿ। ತತ್ವಮಸಿಯೆಂಬ ಮಾಂಗಲ್ಯವನು ಮುದದಿ ॥ ೮ ॥ ಸಾರತರ ದಶವಿಧದ ನಾದಗಳು ಮೊಳಗೆ। ಧಾರೆಯೆರದರು ಯನ್ನ ಪರಮಪುರುಷನಿಗೆ ॥ ೯ ॥ ಅಜ್ಞಭಾವನೆಯೆಂಬ ಬಾಲ್ಯವನುಕಳೆದು। ಸುಜ್ಞಾನವೆಂಬ ಘನಯೌವ್ವನವನು ತಳೆದು ॥ ೧೦ ॥ ತೊರೆದು ಹೊರಗಣ ಬಂಧುಬಳಗವನು। ಸ್ಮರಿಸುತಿದ್ದೆನು ಯನ್ನ ಗುರುಚರಣ ಗಳನು। ಮುಂದೈದುದಿನಕೆ ಶೋಭನವು ನಿಶ್ಚಯವಾಯ್ತು ॥ ೧೧ ॥ ಸಂದೇಹ ವೆಂಬ ಹುಡುಗಾಟ ಬಯಲಾಯ್ತು। ವಿಕಾರಿ ಪ್ರಾರಬ್ಧವೆಂತೆಂಬ ಲಜ್ಜೆಯನು

ಏರಿದೆನು । ಆನಂದವೆಂಬಮಂಚವನು ॥೧೩॥ ಯಾರುಸರಿ ಯನಗಿನ್ನು । ಜನನ ಮರಣಗಳಿಲ್ಲ । ತೋರಿದಲ್ಲಿನಸುಖವ ಪರಶಿವನೆಬಲ್ಲ ॥೧೪॥ ಪರತರಾನಂದರ ಸಮಿಾಬರಬಿಡದೇ ಮರತುದೇಹವ । ಶಂಕರಾರ್ಯನೊಳುಬರದೇ ॥ ೫ ॥

೩೨

ಗುರುಶಂಕರ ನಿಮ್ಮಡಿಕಿಂಕರನೀ । ನರಕಿಂಕರಾಟಕೇ ಅಂಜುವೆನೆ । ಮರಿಯದೆ ನಿಮ್ಮನೆ ಸ್ಮರಿಸುವ । ನಿಮ್ಮಯತರಳನ ಪೊರೆಯುವ ಪ್ರಭುನೀನೆ ॥ಪ॥ ಆದಿಯನಾದಿ ವಿಾರಿದತತ್ವವು । ಬೂದಿಯಬೊಳದರೆ ಹೋದೀತೆ । ಭೇದಿಸಿ ನಿಜದೊಳು ಸಾಧಿಸಿದೀಭವನಾದವ ಕೇಳ್ದರೆ ಪೋದೀತೆ । ವಾದವನಳಿಯದೆ ತೋರದ ಸುಖ ಬರೆವೇದಗಳೋದಿದರಾದೀತೆ । ಶೋಧಿಸಿ ನಿಜವರಿತಮನವು ಪರಾದಿಗಳಿಗೆ ಬೆರಗಾದೀತೆ । ಗುರುಶಂಕರ ॥ ೧ ॥ ದುರ್ನಡೆಮನದೊಳು ಮನೆ ಮಾಡಿದರೆ ಯಮಧರ್ಮನ ಭಯವದಕಂಟೀತೆ । ಮರ್ಮವನರಿಯದ ಮನಸಿನ ಮರ್ಮವು ಚರ್ಮವತೊಳೆದರೆ ಪೋದೀತೆ । ನಿರ್ಮಲವಾಗಿಹ ನಿರ್ಗುಣತತ್ವವು ಕರ್ಮಿಗಳಿಗೆ ಹಿತವಾದೀತೆ । ಗುರುಶಂಕರ ತಾನೇ ತಾನಾಗಿರುವ । ಮಹಾತ್ಮನ ನಾನಾ ವಿಧಿಗಳ ಕಟ್ಟೀತೆ । ಮಾನವರಾಡುವ ಕೇಡುನುಡಿಗಳು ಸುಜ್ಞಾನಿಯ ಕಿವಿಯೊಳು ನೆಟ್ಟೀತೆ । ಹೀನನಿಗರುಪಿದ ತತ್ವವು ಗುರುವಿನ ಮಾನವ ಕಳೆಯದೆ ಬಿಟ್ಟೀತೆ । ಜ್ಞಾನಿಯ ಮನದೊಳು ಪರಶಿವನಿದಿರೊಳು ಕಾಣಿಸಿದರು ಭ್ರಮೆ ಪುಟ್ಟೀತೆ ॥ ಗುರುಶಂಕರ ॥೩॥ ಭಿನ್ನವಕಳಿಯದ ಪುರುಷನಿಗೀಭವ ಬೆನ್ನಂಟದೆ ಬೇರುಳದೀತೆ । ಚಿನ್ಮಯನಾದಗೆ ಮಣ್ಣಿನಪ್ರತುಮೆಯ ಕಣ್ಣೊಳಗಾದರು ಸುಳದೀತೆ । ಮುನ್ನಿವಮರವೆಯು ಕಳೆದರೆ ಮುಂದಕೆ ಪುಣ್ಯಪಾಪಂಗಳು ಬೆಳದೀತೆ । ತನ್ನಾನಂದ ತುದಿಯನು ತಿಳಿದೊಡೆ ಜನ್ಮದ ಬೇರಿನ್ನುಳದೀತೆ । ಗುರುಶಂಕರ ॥೪॥ ಹೊರಳುತ ಮಲದೊಳು ಮುಳುಗುವ ಹಂದಿಗೆ । ಪರಿಮಳ ರಸಸೊಬಗನಿಸೀತೆ । ನರಪತಿಪಟ್ಟವ ನಾಯಿಗೆಕೊಟ್ಟರೆ ಹರುಷದಿ ರಾಜ್ಯವ ನಾಳೀತೆ । ತೊರೆದುಪತಿಯಪರಪುರುಷರ । ಕೆಡಿಸುವ ದುರಳಗೆ ಶೀಲವು ಸೊಗಸೀತೆ । ಗುರುಚರಣಾಂಬುಜಸೇವೆಯು ಪಾಪಿಷ್ಠರ ಮನಸಿಗೆಹಿತವಾದೀತೆ। ಗುರುಶಂಕರ ನಿಮ್ಮಡಿಕಿಂಕರ ನೀ । ನರಕಿಂಕರಾಟಕೆ ಅಂಜುವೆನೆ । ಮರಿಯದೆ ನಿಮ್ಮನೆ ಸ್ಮರಿಸುವ ನಿಮ್ಮಯ । ತರಳನ ಪೊರೆಯುವ ಪ್ರಭುನೀನೆ ॥ ೫ ॥

೩೩

ತನುವೆ ನಾನೆಂದರಿತು ಭವದೊಳ್ಯಾತಕೆ ಬರುತೆ । ತನುವೇ ಲಕ್ಷಣನೆಂದು ತಿಳಿದು ಸುಖಿಯಾಗೈ ॥ಪ॥ ಘಟವಕಾಣುವ ನರನು ಘಟವಲ್ಲವೆಂತರಿತು । ಘಟದಂತೆ ನಿನಗನ್ಯವಾಗಿ ತೋರುತ್ತ । ಕುಟಿಲ ಮಾಯಾಕಾರ್ಯವೆನಿಸಿದೀ ತನುವೆತ್ತ । ಧಿಟವೆನಿಸಿದಮಳಾತ್ಮನಾದ ನೀನೆತ್ತ । ತನುವೆ ॥೧॥ ತನುದೃಶ್ಯ ವಾಗಿಹುದು ನೀನದಕೆ ದೃಗ್ರೂಪ । ತನುವು ಲಯವಾಗುವುದು ಲಯರಹಿತ ನೀನು । ತನು ಮಾಂಸಮಯಪಿಂಡ ನೀನು ನಿರ್ಮಲರೂಪ । ತನುಮೂರ್ತ ನೀನೆ ಮೂರ್ತಕನಾಗುನಿಂತು ॥ ತನುವೆ ॥ ೨ ॥ ಇಲ್ಲದಿಹಜಾತಿಯುಂ ಕೂಡಿರುವುದೀ ತನುವು । ಸೊಲ್ಲಿಡದೆ ನಿನ್ನೊಳಗೆ ಜಾತಿಧರ್ಮಗಳು । ಹುಲ್ಲಿಗಿಂತ ನಿಕೃಷ್ಟ ವಾಗಿರುವುದೀ ತನುವು । ಸುಲಲಿತಚಿದ್ರೂಪ ನೀನಾಗುತಿಂತ । ತನುವೆ ॥ ೩ ॥ ತನುಜರಾಮರಣ ರೋಗಾದಿಗಳಿಗಾಲಯವು । ಜನನಾದಿವಿಕೃತಿತೋರದವಸ್ತು ನೀನು । ತನುರುಧಿರಮೇದೋಸ್ಥಿ ನರಮಜ್ಜಯಕೂಪ । ವನುಪಮಾನಂದ ಸ್ವರೂಪ ನೀನಾಗಿ । ತನುವೆ ॥೪॥ ನಿರುಪಮ ನಿರಾಲಂಬ ನಿತ್ಯನಿರ್ಮಲಬದ್ಧ । ಕರುಣಾದಿ ದೃಶ್ಯಸಾಕ್ಷಿಕನಾಗಿ ನೀನು । ಗುರುಶಂಕರಾರ್ಯನೋಳ್ಬೆರದೇಕನಾಗದೇ ಮರತು ನಿನ್ನಯ ನಿಜವ ಕರ್ಮದೊಳು ಸಿಲುಕಿ । ತನುವೆ ॥ ೫ ॥

೩೪

ನಾನೇ ನಾನಲ್ಲದಿನ್ನೇನೊಂದು ತೋರೆದು । ನಾನೆನ್ನ ನಿಜವನು । ಧ್ಯಾನಿಸಿ ನೋಡೇ ॥ ಮಾನಮೇಯಗಳೆಂದು । ಕಾಣುವೀ ತ್ರಿಪುಟಿಯು । ಭಾನತೋರದ ಸಚ್ಚಿ । ದಾನಂದನಿಧಿಯೊಳು । ನಾನೇ ನಾನಲ್ಲದಿ ॥ ಪ ॥ ನಿರುವಧಿಕನು ನಾನೇ ॥ ಪರಿಪರಿ ರೂಪವ ಧರಿಸಿದವನು ನಾನೇ । ಪರಮನೆನಿಸಿ ಜಗವ ಪೊರೆಯುವನು ನಾನೇ ॥ ನಾನೇ ನಾನಲ್ಲದಿ ॥೧॥ ಜನನರಹಿತ ನಾನೇ ಘನಮಹಿಮನು ನಾನೇ । ಮುನಿಮುನಿ ಗಂಧರ್ವವಿನುತನು ನಾನೇ । ಗಣನ ವಿಘೂರ ನಾನೇ । ಗುರುರಹಿತನು ನಾನೇ । ವನಜಾಕ್ಷವಿಧಿರುದ್ರರೆನಿಸಿದವನು ನಾನೇ ॥ ನಾನೇ ನಾನಲ್ಲದಿ ॥ ೨ ॥ ಮಲಿನಸತ್ವವು ನಾನೇ । ಕಲತದರೊಳು ನಾನೇ । ಮಲಿನಜೀವನುಯೆಂದು ತಿಳಿದವ ನಾನೇ । ತಿಳಿಯದೆ ತತ್ವವ ಕಳವಳಿಸುವನು ನಾನೇ । ಬಳಸಿ ಜನ್ಮಗಳನು ಬಳಲಿದವನು ನಾನೇ ॥ ನಾನೇ

ನಾನಲ್ಲದಿ ॥ ೩ ॥ ಪರಮಾರ್ಥಿಕ ನಾನೇ । ಮೂರುಕಾಲವು ನಾನೇ । ಸಾರುವೀ ಶೃತಿ ನಾನೇ । ಪುರುಷ ನಾನೇ । ಕಾರ್ಯಕರ್ತನು ನಾನೇ । ಪ್ರೇರಿಸುವನು ನಾನೇ। ಮೂರು ಮೂರ್ತಿಗಳನು ಮೀರಿದವನು ನಾನೇ । ನಾನೇ ನಾನಲ್ಲದಿ ॥ ೪ ॥ ದೇಹರೂಪನು ನಾನೇ । ದೇಹಿಯಾದವ ನಾನೇ । ಸೋಹಮೆಂದರಿಯದ ಮೋಹಿಯು ನಾನೇ । ಸಾಹಸವನು ತಿಳಿದೂಹಿಸಿ । ತತ್ವವ ಕೋಹಮೆಂದರಿತು। ನಿರ್ಮೋಹಿಯಾದವ ನಾನೇ । ನಾನೇ ನಾನಲ್ಲದಿ ॥ ೫ ॥ ಗೂಢದೃಶ್ಯವು ನಾನೇ । ನೋಡುವದೃಕ್ಕು ನಾನೇ । ಗೂಢವೆಲ್ಲವಬಲ್ಲಾರೂಢನು ನಾನೇ । ಆಡುತ ಪಾಡುತ । ವೋಡುತಬೇಡುತ । ನೋಡುತ ನಾಡೋಳುಕೂಡಿರುವನು ನಾನೇ । ನಾನೇ ನಾನಲ್ಲದಿ ॥ ೬ ॥ ಈ ಜಗವೆಲ್ಲ ನಾನೇ । ಪೂಜಿಸುವವನು ನಾನೇ । ಪೂಜ್ಯನು ನಾನೇ । ಭೋಜಿಪುವನು ನಾನೇ । ಭೋಜ್ಯರೂಪನು ನಾನೇ । ಈ ಜೀವ ಶಿವರಂತೆ ರಾಜಿಸುವನು ನಾನೇ । ನಾನೇ ನಾನಲ್ಲದಿ ॥ ೭ ॥ ನೆನಸಿನೊಳಗು ನಾನೇ । ಕನಸಿನೊಳಗು ನಾನೇ । ತನಿನಿದ್ರೆಯೊಳು ನಾನೇ । ಕೊನೆಯೊಳು ನಾನೇ । ಧನುಮನೋಧಾನ್ಯವಾ । ಹನವಸ್ತ್ರ ಭೂವಾರಿ ಕನಕಾದಿ ರೂಪಿನಿಂ ಜನಿಸಿದವನು ನಾನೇ । ನಾನೇ ನಾನಲ್ಲದಿ ॥ ೮ ॥ ಅರುಹುರೂಪನು ನಾನೇ । ಮರವೆಯಾದವ ನಾನೇ । ಅರಹು ಮರವೆಗಳೊಳಿರುವನು ನಾನೇ ॥ ಗುರುಶಂಕರಾರ್ಯನೋಳ್ ಬೆರದೇಕ ಮಯನಾಗಿ । ಪರಿಪೂರ್ಣಭಾವದಿಂದಿರುವನು ನಾನೇ ॥ ನಾನೇ ನಾನಲ್ಲದಿನ್ನೇನೊಂದು ತೋರದು ॥ ೯ ॥

೩೫

ಸೂನುಕೇಳ್ ತತ್ವಮಸಿವಾಕ್ಯಾರ್ಥವನು ಪೇಳ್ವೆ । ನೀನದನು ಮನನ ಮಾಡುತ ಮುಕ್ತನಾಗೈ । ಅಕಲಂಕ ಶಕ್ತಿತ್ವ ಸಕಲಜಗದವನತ್ವ । ಸಕಲ ಲೋಕೇಶತ್ವ ಸರ್ವಜ್ಞತ್ವಾದಿ । ಸಕಲ ಸದ್ಗುಣಯುಕ್ತ ಚೈತನ್ಯವೇ ಶಾಸ್ತ್ರ ನಿರಕದಿಂದ ತತ್ಪದಕೆ ವಾಚ್ಯಾರ್ಥವಹುದು ॥ ೧ ॥ ತನುಕರಣವೊದಲಾದ ದೃತ್ಯಾಭಿಮಾನದಿಂ । ಘನಹೊಮ್ಮಿನೊಡನೆ ತಾದಾತ್ಮ್ಯವನು ತಳೆದು ಅನುಭವಿತೃಕರ್ತೃತ್ವಧರ್ಮತ್ವಯುತ ಚೈತನ್ಯ । ಗಣಿಸಲಾತ್ವಂಪದಕೆ ವಾಚ್ಯಾರ್ಥವಹುದು ॥ ೨ ॥ ಕರಣೇಂದ್ರಿಯಾದ ದೇಹತ್ರಯಾವಸ್ಥಾಗ । ಪರಿಪರಿಯ ದೃಶ್ಯಕ್ಕೆ ಸಾಕ್ಷಿತಾನಾಗಿ ಮರಣಾದಿಧರ್ಮವೇನಿಲ್ಲಕೂಟಸ್ಥ । ಪರಮಚೈತನ್ಯತ್ವಂ

ಪದಕೆಲಕ್ಷ್ಯಾರ್ಥವಹುದು ॥ ೪ ॥ ಪರವಿಡಿದುಪಪದಯುಗದೊಳಿಹ ವಿರುದ್ಧಾಂಶ ವನು ತೊರೆದು । ಭಯಚೈತನ್ಯಗಳನೊಂದುಮಾಡಿ । ಗುರುಶಂಕರಾರ್ಯನೇ ನೀನೆನುತಬೋಧಿಸುವ ಪರತತ್ವವಸಿಪದಕೆ ಮುಖ್ಯಾರ್ಥವಹುದು ॥ ೫ ॥

೩೬

ತಾನೇ ತಾನಾಗಬೇಕು । ತನ್ನೊಳಗೆ ಬ್ರಹ್ಮಾನಂದತೋರಬೇಕು । ನಾನಾವಿಧಾನ ಭಾನಗಳಲ್ಲಿ ಸೇರಿದ ಮಾನವನು ಕಳೆದೇನೊಂದು ತೋರುವ ॥ ತಾನೇ ॥ ಪ ॥ ಉಡುಪವಾಸಿಯಾಗಿ । ಲೋಕವನ್ನೆಲ್ಲ ಕಂಡು ಕಣ್ಣಿಲ್ಲವಾಗಿ । ಖಂಡವೆನಿಸುವ ಬ್ರಹ್ಮಾಂಡಪೆಲ್ಲವನು ॥ ಪಿಂಡಾಂಡವೆನಿಸಿ ತಾನಖಂಡ ತೇಜದಿ ಕೂಡಿ । ತಾನೇ ತಾನಾಗಬೇಕು ॥ ೧ ॥ ಅನ್ನಮಯಾದಿಯೊಳು । ಚಿನ್ಮಯನು ತತ್ತನ್ಮಯನಾಗಿರಲು ॥ ತನ್ಮಯವಳಿದೆಲ್ಲ । ಸನ್ಮಯವಾಗಲನನ್ಯಭಾವದೊಳು। ಮನೋನ್ಮನಿಯನು ಮೀರಿ । ತಾನೇ ತಾನಾಗಬೇಕು ॥ ೨ ॥ ಪರಿನಾರೀವಳ ಬೆರೆತು । ಮಾಡುವ ನಾನಾ ॥ ಪರಧರ್ಮಂಗಳ ತೊರದು । ಮರವೆಯ ಮೂಲವ । ಮುರಿದು । ಸೋಹಂಭಾವ । ದುರುಹಿನೊಡನೆ ನಮ್ಮ ಗುರು ಶಂಕರನ ಬೆರೆತು । ತಾನೇ ತಾನಾಗಬೇಕು । ತನ್ನೊಳಗೆ ಬ್ರಹ್ಮಾನಂದ ತೋರಬೇಕು ॥ ೩ ॥

೩೭

ಮನವೇನು ಪುಣ್ಯಮಾಡಿ ಗುರುವಿನ ಪದವಸೇರೀತೇ । ಮಾನುಸೀ ಮಣಿಯೆನಿಂದಿಗೆ ಬಂಧತೊಲಗೀತೆ ॥ ಪ ॥ ಮಂದರೊಳಗಿದೆಲ್ಲ ಬಳಸುವಂದ ತೋರೀತೆ । ಕುಂದದೆನ್ನೊಳಗೆ ಬ್ರಹ್ಮಾನಂದವೇರಿತೇ । ಮನದೇಪದೊಡನೆ ಮೊದಲೊಳಿದ್ದ ಸಂಗಪೋಯಿತೇ । ಮೋಹವೇರಿಸುವಲಿಂಗ ಭಂಗವಾಯಿತೇ ॥೧॥ ಕಲ್ಲಿನೊಳಗೆಕಂಡ ದೇವರೆಲ್ಲಿಗೋಡೀತೇ। ಅಲ್ಲಿ ಇರುವುದನ್ನೆಲ್ಲ ಕೂಡೀತೇ। ಮನವೇನು ॥ ೨ ॥ ಪೇಳಲಾರೆನು ಸಖಿಯೆ । ಪರಮಸುಖದ ಮೂಲವ । ಪಾಲಲೋಚನನೆಬಲ್ಲ ಗುರುವಿನಾಳವ ॥ ೩ ॥ ತನುವಕೂಡಿ ಕಳೆವ ಬೀಜಗಣಿತ ದೊರತೀತೇ । ಜನಿಸಿಸಾಯುವುದಿದೆಲ್ಲ ತನುವಿಗಾಯಿತೇ। ಮನವೇನು ॥ ೪ ॥ ನೂರುಕೋಟಿಜನ್ಮ ಸುಕೃತರಾಸಿ ಫಲಿಸೀತೇ । ಮೂರು ಮೂರ್ತಿಗಳಪದವಿ ತುಚ್ಛಮೆನಿಸೀತೆ । ಮನವೇನು ॥ ೫ ॥ ಅಂಕೆಯಿಲ್ಲದೆ ಮೆರೆವ ಮನದ

ಹರುಷವೆಂಬುದು । ಶಂಕರಾರ್ಯನಲಿಸೇರಿ ಪರಮನಾದುದು ಮನವೇನು । ಪುಣ್ಯವಮಾಡಿ ಗುರುವಿನ ಪದವ ಸೇರೀತೇ ॥ ೬ ॥

೩೮

ಆನಂದವಾನಂದವಾಯಿತು । ಬ್ರಹ್ಮಾನಂದವಾನಂದವಾಯಿತು ॥ ಪ ॥ ನಾನು ನೀನದಿದವೆಂತೆಂಬುದ । ಮನತಿ ಮಾಣದೆ । ಘೋರ ಮೃತ್ಯುಪಾಶದ ತುದಿ ॥ ಗೊಣೆಯಿಲ್ಲದೆ ಕೊರಳೊಡ್ಡಿದ । ಸಮ್ಯಜ್ಞಾನರಹಿತ । ಕರ್ಮಿಗಳಿಗ ಗೋಚರಿಸದ ॥ ಆನಂದವಾನಂದ ॥ ೧ ॥ ಮೋಹಾದಿಗಳು ಹಮ್ಮಿಗಾಗಲು । ಸ್ಥೂಲದೇಹಕ್ಕೆ ಕುಲಜಾತಿಸೇರಲು । ಮಾಯಾಸಾಹಸವೆಲ್ಲ ವ್ಯರ್ಥವಾಗಲು। ಯನಗೆ ಸೋಹಂಭಾವನೆಯುಳಿದಿನ್ನೇನು । ತಿಳೀದಿರಲಾನಂದ ॥ ೨ ॥ ಅಲ್ಲಿಂಟಿಲ್ಲಿಲ್ಲವೆಂಬ ಭಾವವ ಮೀರಿ । ಯಲ್ಲೆಲ್ಲು ತುಂಬಿ ತುಳುಕಾಡುವ । ಕರ್ಮದಲ್ಲಿರ್ಪನಿಗೆ ದೂರವಾಗುವ । ನಿತ್ಯ ಸಲ್ಲಲಿತಾಖಂಡಚಿತ್ತ । ನಾನಾದ ಮೇಲೆ । ಆನಂದವಾನಂದ ॥ ೩ ॥ ಮನಸಿಗಾಯಿತು ಸಂಕಲ್ಪಾದಿಗಳ್ । ಲಿಂಗ ತನುಗತವಾಯ್ತು । ಕ್ಷುತ್ಪಿಪಾಸೆಗಳ್ । ತಿಳಿಯಲಿನಿತಕ್ಕೆ ಸಾಕ್ಷಿತ್ವ । ವೆನಗಾಯ್ತೆಂದರಿತಮೇಲೆ । ಆನಂದವಾನಂದ ॥ ೪ ॥ ಮನದಬಯಕೆ ಯನ್ನದೆನ್ನದೇ ಕರಣತನು ಧರ್ಮಕರ್ಮದೊಳು ಸೇರದೇ । ಕರ್ಮಿಜನರ ದುರುಕ್ತಿಗೆಬೆಚ್ಚದೇ । ತೋರ್ಪಿಂನೆನಸೀನ ಜಗವನು । ಕನಸೀನಂತರಿತಮೇಲೆ । ಆನಂದವಾನಂದ ॥ ೫॥ ಧೀರತ್ವವನು ಪರಿಭಾವಿಸಿ। ಶ್ರುತಿಸಾರದರ್ಥವ ಪರಿಶೋಧಿಸಿ। ದ್ವೈತಮಾರಿಯ ಪೆಸರ ನಿರ್ಮೂಲಿಸಿ । ಬಳಿಕ ಮೂರು ಮೂರ್ತಿಗಳನು ಮೀರಿ । ನಾನಿಲ್ಲಲಾಗಿ। ಆನಂದವಾನಂದ ॥ ೬ ॥ ಪರಜೀವ ಭೇದವೆಂಬುದಿಲ್ಲದೇ । ದೃಶ್ಯ ಕರಣಾದಿ ಭಾವನೆತೋರದೇ । ನಾನು ಗುರುಶಂಕರಾರ್ಯನೋಳ್ ಬೆರದೇಕನಾದಮೇಲೆ। ಆನಂದವಾನಂದ ॥ ೭ ॥

೩೯

ಕುಲಜಾತಿ ಛಲವೆಂಬುದುಳಯುದಂ ತಿಳಿದಮೇಲಿನ್ನೇನಿನ್ನೇನು । ಮಲವಿಲ್ಲದಿರಾವೊ ನಿಶ್ಚಲವೊಂದೆ ನಿಲ್ಲುವದಲ್ಲೇನಿನ್ನೇನು ॥ ೧ ॥ ಮೂಲ ಕುಂಚಲಿ ಇರುವ ಮೂಲವ ಕಂಡಮೇಲಿನ್ನೇನಿನ್ನೇನು । ಮೇಲಾದ ತಾಟಕವೊಳು ತಾನೇ ನಿಲ್ಲುವನಲ್ಲೇನಿಲ್ಲೇನು ॥೨॥ ಮನನಜನನಭರಣದೊಳು ತಾನಿರ್ದ

ಮೇಲಿನ್ನೇನಿನ್ನೇನು । ಅರಿವುಮರವೆಗಳಿದರಿವಾತನಾಗುವನಲ್ಲೇನಲ್ಲೇನು॥ ೩॥ ಕಣ್ಣುಬೆಳಕು ನಿಲ್ಲದೆಲ್ಲವ ಕಂಡಮೇಲಿನ್ನೇನಿನ್ನೇನು । ತನ್ಮಯವೆಲ್ಲವೀ ಚಿನ್ಮಯವಾಗುವುದಲ್ಲೇನಿನ್ನೇನು ॥ ೪ ॥ ಧನಪತಿ ಸುರರೆಲ್ಲರೆನಗಾಗೆಂದರಿತ ಮೇಲಿನ್ನೇನಿನ್ನೇನು । ವನಿತಾದಿವಿಷಯಸುಖವು ಬೇರೆಂದೆನಿಸದಿನಲ್ಲೇ ನಿಲ್ಲೇನು । ಅಂದಿಂದು ಹಿಂದೆ ಮುಂದಿಲ್ಲದುದಲ್ಲಾಗಲಿನ್ನೇನಿನ್ನೇನು । ಎಂದೀಗು ಇಲ್ಲೆಂಬುದಿಲ್ಲಾತನಾಗುವನಲ್ಲೇನಿಲ್ಲೇನು॥೫॥ ಪುರದೊಳಗಿರುವನು ಹೊರಗೆಲ್ಲನಿಂತಮೇಲಿನ್ನೇನಿಲ್ಲೇನು । ಹೊರಗೀನ ಜಗವಿದು ಪುರದೊಳು ಸೇರುವದಿಲ್ಲೇನಿಲ್ಲೇನು ॥ ೬ ॥ ಮುನ್ನಿರ್ದಮುದುಕಿಯು ಮುರಿದುನುಂಗಿದ ಮೇಲಿನ್ನೇನಿನ್ನೇನು । ತನ್ನಮುಂದಿರುವೊ ತಳವಾರನ ಕಾಣುವನಲ್ಲೇನು ನಿಲ್ಲೇನು ॥ ೭ ॥ ತಳವಾರನೊಳಗೀನ ಕೊಳೆಯಲ್ಲ ಕಳೆದಮೇಲಿನ್ನೇನಿನ್ನೇನು । ಉಳಿವ ಶ್ರೀಗುರುಶಂಕರಾರ್ಯ ತಾನಾಗುವನಲ್ಲೇನಿಲ್ಲೇನು ॥ ೮ ॥

೪೦

ಬಲ್ಲೋಡಿ ತತ್ವದೋಳ್ಕೂಡಿ ನೀವು । ಅಲ್ಲಲ್ಲಿಪಿರತು ಸುಮ್ಮನೆ ಕೆಡಬ್ಯಾಡಿ । ಬಲ್ಲೋಡಿ ತತ್ವದೋಳ್ಕೂಡಿ ॥ ಪ ॥ ಸೊಲ್ಲಿಡಲದು ವೇದ್ಯವಲ್ಲ । ಅದಿನ್ನೆಲ್ಲಿನೋಡಿದರು ಕಣ್ಣಿಗೆ ಕಾಂಬೊದಲ್ಲ । ಯಲ್ಲಲ್ಲು ತಾನೆತಾನಲ್ಲ ಅದರುಲ್ಲಾಸನೋಡಿ ಈ ಜಗವೆಲ್ಲ । ಬಲ್ಲೋಡಿ ॥ ೧ ॥ ವಂದಾಗಿ ಐದೆನಿಸುವುದು । ಬಳಿಕೊಂದಾಗಿಮುಂದೆ ಮೂರೆನಿಸಿಕೊಂಬುವದು। ಬಂಧನವನು ಕಲ್ಪಿಸುವುದು ಅದರೋಳ್ । ಹೊಂದಿಯಿಲ್ಲದ ಚಿತ್ರಂಗಳನೆ ನೋಡುವುದು । ಬಲ್ಲೋಡಿ ॥ ೨ ॥ ರೂಪುನಾಮಗಳದಕಿಲ್ಲ । ಅಧ್ಯಾರೋಪ ದೊಳಿರಿಸಿದೊಡದು ಸಿಕ್ಕೋದಲ್ಲ । ತಾಪತ್ರಯಂಗಳಲ್ಲಿಲ್ಲ ಧೂಪದೀಪ ನೇವೇದ್ಯಕ್ಕೆ ಅದು ವೇದ್ಯವಲ್ಲ । ಬಲ್ಲೋಡಿ ॥ ೩ ॥ ಕಾಶಿಯೊಳರಸಿದೊಡಲ್ಲಿ ಉಪವಾಸದಿಂದ ಬಳಲುವರಿಗೆ ಸುಲಭವಲ್ಲ । ನಾಶವೆಂಬುದದಕಿಲ್ಲ । ಮಾಯಪಾಶಕಳದರದುಗೂಢಮಾಗಿಲ್ಲ । ಬಲ್ಲೋಡಿ ॥ ೪ ॥ ಅರಶಿಕಾಣರು ಲೋಕಾಯುತರು ಅದನರಿತವರೆಲ್ಲ ದೇಹವನೆಬಿಡುವರು । ಪರಕಿಸುತದನೆ ಒಗ್ಗುವರು । ಅದರ ಸಿರಿಯುಕಂಡವರಿನ್ನು ಮರಳಿಜನ್ಮಿಸರು । ಬಲ್ಲೋಡಿ ॥ ೫ ॥ ಕಳದುಳಿಯುವದೆ ತಾನಹುದು । ನೋಡಲೊಳಹೊರಗೆಲ್ಲು

ತಾ ತುಂಬಿಕೊಂಡಿಹುದು। ತಿಳಿಯದೆ ಕಳವಳಿಸುವುದು। ಅದು ತಿಳಿದೊಡೆ ಲೋಕವೆಲ್ಲವ ಕೆಡಿಸುವುದು। ಬಲ್ಲೋಡಿ ॥೬॥ ಮೂರುದೇವರ ಮೇಲೇರುವುದು। ಬೇರೆಬೇರಾಗಿ ಮೂರುಲೋಕಗಳನಾಳುವುದು। ಆರಾನೇನೇಲೆಯು ತಾನಹುದು। ಬಲ್ಲೋಡಿ ॥೭॥ ಯಡಬಲದೊಡೆಯರಪಿಡಿದು। ಕಟ್ಟಿನಡುವ ಮೇಲಿರುವರಡನ್ನೆಲ್ಲೆ ತಡದು। ಬಡಗಲ ಗುಡಿಯೊಳು ಸುಳಿದು। ಸುಧೆಯ ಕುಡಿದೊಡೇನದು ಬೇರಿನ್ನೆಲ್ಲಿ ಕಾಣೇಸದು। ಬಲ್ಲೋಡಿ ॥೮॥ ಮರಣಜನ್ಮಗಳದಕಿಲ್ಲ। ಕಾಯಕರಣಕಾರ್ಯಗಳೊಳು ಬೆರೆಯುವದಲ್ಲ। ಮರೆಯೊಳಗದು ನೆಲಸಿಲ್ಲ। ಇದನು ಗುರುಶಂಕರಾರ್ಯನೋಳ್ ಬೆರದಾತಬಲ್ಲ। ಬಲ್ಲೋಡಿತತ್ವದೋಳ್ ಕೂಡಿ ॥೯॥

# ಅತಿತೀವ್ರತರ ಸಂಸ್ಕಾರ ಲಕ್ಷಣ

೪೧

ಬೋಧಿಸೈ ಶ್ರೀ ಗುರುವೇ ಬೋಧಿಸೈ । ಸಾಧನಂಗಳನೆಲ್ಲ ಪಡೆದ ಗುರು ಪಾದಪದ್ಮಂಗಳಪಿಡಿದು । ನಾನಾವಾದಿ ಮತಗಳನು ತಡದು । ಪುಸಿಬೇಧಾಬೇಧ ಗಳನುಬಾಧಿಸಿ ತತ್ವವಶೋಧಿಸಿ ಬ್ರಹ್ಮವಸಾಧಿಸಿ ಸುಖಿಸೆಂದು ಬೋಧಿಸೈ ॥ಪ॥ ದಿನಗಳೊಂದರೊಳುವಂದಿಲ್ಲ । ಜಾಗ್ರತ್ಕನಸುಗಳೆರಡುವಂದಲ್ಲ । ಕಳದ ತನುಗಳೀತನುವಾಗದಲ್ಲಿ ನಿಂತು । ದಿನಮಾಸಯುಗ ಸರ್ವತನುಗಳೊಳೊ ಬಿಡದನುಸರಿಸಿರೆ । ಸದ್ರೂಪನುನೀನೆಯುಹುದೆಂದು । ಬೋಧಿಸೈ ॥ ೧ ॥ ಪೊಳೆವಸ್ವಪ್ನದಜಗವೆಲ್ಲ ಜಾಗ್ರತ್ಕಳೆಯುಂತೆ ಕಾಣುತಿಹುದಲ್ಲ । ಅಲ್ಲಿ ಬೆಳಗೀಪ ವಸ್ತುವೆಯಿಲ್ಲ । ಅದುತಿಳಿಯೆ ನಿನ್ನನುಪಮುಬೆಳಕಿನಬಲದಿಂದ । ಬೆಳಗಲು ನೀನೇ ನಿರ್ಮಲಚಿದ್ರೂಪನುಯೆಂದು । ಬೋಧಿಸೈ ॥ ೨ ॥. ಸಂದನಸತಿಹಿತರೆಲ್ಲ ನಿನ್ನಾನಂದಕ್ಕೋಸುಗವೇಕೇಳೆಲ್ಲ । ಹಿತವೊಂದು ನಿನಗಧಿಕವಾದ್ದಿಲ್ಲ । ಇಲ್ಲಿ ಸಂದೇಹವೇಕಿನ್ನು । ಯುಂದಿಗೂಕೆಡದ ಆನಂದಸ್ವರೂಪ ನಾಯೆಂದು ಭಾವಿಸಂ ಯೆಂದು ಬೋಧಿಸೈ ॥೩॥ ಹಿಡಿವ ಧರ್ಮಗಳೊಂದಿಲ್ಲ । ನೀನುಬಿಡುವ ಬಾಧಕ ಗಳೇನೆಲ್ಲ । ಮುಂದೆ ಪಡೆವ ಸದ್ಗತಿ ಬೇರೊಂದಿಲ್ಲ । ನಿನಗೆ ವಡಲಿಲ್ಲ । ಮುಡಿಯಿಲ್ಲ । ವಡಿಯಿಲ್ಲವೆಡೆಯಿಲ್ಲ । ತಡೆಯಿಲ್ಲ ಕಡೆಯಿಲ್ಲ । ನಡೆನುಡಿ ಯಿಲ್ಲೆಂದು ಬೋಧಿಸೈ ॥೪॥ ಕರಣಕಾರ್ಯವು ನಿನ್ನದಲ್ಲ । ನಾಕನರಕವಾಸದ ತೊಡಕಿಲ್ಲ । ನಿನ್ನ ಪರಿಪೂರ್ಣಾನಂದವಿದೆಲ್ಲ । ನಿನಗೆ ಸಿರಿಯಿಲ್ಲ ಸೆರೆಯಿಲ್ಲ । ಪುರವಿಲ್ಲ । ಕುರುಹಿಲ್ಲ ಜರೆಯಿಲ್ಲ । ತೆರೆಕೊರೆಯಿಲ್ಲೆಂದು ಬೋಧಿಸೈ ॥ ೫ ॥ ಧರೆಮೊದಲಹದೃಶ್ಯವೆಲ್ಲಿ ನಿನ್ನಿಂದುರಹಿಸಿಕೊಂಬುದಿದೆಲ್ಲ । ನಿನ್ನನರಿವವಸ್ತುವು ಬೇರೊಂದಿಲ್ಲ । ನೀನು ಪರಮಸಾಕ್ಷಿಯು । ನಿನ್ನೊಳಿರದು ದೃಶ್ಯದಧರ್ಮ । ವರಿದೋಡಿಮರ್ಮವ ಮರಣವಿನ್ನಿಲ್ಲೆಂದು ಬೋಧಿಸೈ ॥೬॥ ನಿನ್ನ ನಿಜವನೆಲ್ಲ ತಿಳಿದು । ಜಗವನು ಕನಸಿನಂತೆ ಕಳದು । ಪುಸಿಜನ್ಮಾದಿ ಬಂಧವ ತೊಳದು । ನೀನು ಮುನ್ನಿರ್ದಶಿವಜೀವ ಭಿನ್ನತ್ವವಳಿದು । ಮಹೋನ್ನತಾನಂದ ಸಚ್ಚಿನ್ಮಯ

ನಾಗೆಂದು ಬೋಧಿಸೈ ॥೭॥ ವಾಸನೆಗಳನೆಲ್ಲನುಳಿದು ಪಂಚಕೋಶ ಧರ್ಮಂಗಳ ತಿಳಿದು। ಮಿಥ್ಯಾನಂದಸತ್ರಯುವ ನೀತಿಗಳೆದು। ಬಳಿಕ ಕ್ಲೇಶಪಂಕ ಮಾಯಾ ಪಾಶಕ್ಕೆ ಸಿಲುಕದೆ। ನಾಶರಹಿತ ಜಗದೀಶ ನೀನಾಗೆಂದು ಬೋಧಿಸೈ ॥ ೮ ॥ ಪರಲೋಕದಾಸೆಯಬಿಟ್ಟು। ನಿಜಗುರುಬೋಧೆಯಲಿ ಮನವಿಟ್ಟು। ನಾನು ಶರೀರವೆಂಬುವ ಭ್ರಾಂತಿಕೆಟ್ಟು। ಪೂರ್ಣಪರಮಸಾನೆಂಬುದ ಮರಿಯದೆ ದೃಢವಾಗಿ। ಗುರುಶಂಕರಾರ್ಯನೋಳ್ ಬೆರದೇಕನಾಗೆಂದು। ಬೋಧಿಸೈ ಶ್ರೀ ಗುರುವೇ ನೀ ಬೋಧಿಸೈ ॥ ೯ ॥

೪೨

ಬಳಲುವೆನಿನ್ನೊಳು ಬೆಳಗುವಾನಂದವ। ತಿಳಿಯಾದೆ ಸುಮ್ಮನ್ಯಾತಕೆ ಜೀವನೇ ॥ಪ॥ ಪರಿಭವದೊಡಗೂಡಿ। ಚಿರಿಸುವೋ ದೇಹವ। ಹೊರವಳಗಣ ಮರವೆಯ ಕಾರ್ಯವ। ನರಿತಲ್ಲಿ ಬೆರೆಯದೆಲ್ಲವನು ಬೆಳಗಿಸುವವರ। ಪರಂಜ್ಯೋತಿ ಸ್ವರೂಪನೇ ನೀನಾಗಿ। ಬಳಲುವೆ ನಿನ್ನೊಳು ॥ ೧ ॥ ಕರಣದೊಳಡಿಯೂರಿ। ಪರನಾಗುತೀಂದ್ರಿಯಾಂ। ತರದಿಂದ ಪೊರಟು ಬಾಹ್ಯರೂಪವ ಧರಿಸಿ। ಯಲ್ಲ ರೊಳು ತುಂಬಿರುವೆನೆಂಬುಭಯವ। ಮರಸುವ ಪರಿಪೂರ್ಣಾನಂದವೆ ನೀನಾಗಿ। ಬಳಲುವೆ ನಿನ್ನೊಳು ॥ ೨ ॥ ಗುಣಿಘಣಿಯೊಳುನಸಿದವನ। ಭಾವಾಭಾವದಿ ಜನಿಸಿ। ತೋರುವ ಕಲ್ಪಿತಕೆ ಮೂಲಕೆ ಮನೆಯಾಗಿ ಜನನಬಂಧನ ಬಾಧೆ ತೋರದ। ಚಿನುಮಯ ಶಂಕರಾರ್ಯನ ರೂಪೆ ನೀನಾಗಿ। ಬಳಲುವೆ ನಿನ್ನೊಳು ಬೆಳಗುವಾನಂದವ ತಿಳಿಯದೆ। ಸುಮ್ಮನ್ಯಾತಕೆ ಜೀವನೆ ॥ ೩ ॥

೪೩

ಗುರುವೇ ಪರಶಿವನು। ಲೋಕದಿ ತನ್ನನರಿತಾತನೆ ಮುಕ್ತನು ॥ ಮರಣ ಜನನ ದುಃಖ। ದುರಿಯಿಂದ ತಪಿಸುವ ತರಳನ। ನಿಜಸುಖ ಶರಧಿಯೊಳಿರಿಸಿದ। ಗುರುವೇ ಪರಶಿವನು ॥ ೧ ॥ ರೂಪುನಾಮಂಗಳನು ಭಾವಿಸಿಕೊಂಡು। ತಾಪ ದೊಳಿರಲು ನಾನು। ಪಾಪಪುಣ್ಯಂಗಳ ಲೇಪವಿಲ್ಲದ ನೀನು। ಅಪರಸುಖ ಸಚ್ಚಿದ್ರೂಪನೆಂದರುಪೀದ। ಗುರುವೇ ಪರಶಿವನು ॥೨॥ ಕರಣ ಧರ್ಮಂಗಳನು ನಿನ್ನೊಳಗಧಿಕರಿಸಿಕೊಂಡಿರಲು ನೀನು। ವರಚಿದ್ಘನಾನಂದ ಶರಧಿಯಾಗಿಹ। ನಿನ್ನ ದುರದುಃಖಚಯುವನು। ಸರಿಸಿತೆಂದರುಪೀದ। ಗುರುವೇ ಪರಶಿವನು ॥೩॥

ಯುಂದಿಗಾದರು ಕೆಡದೆ। ನಾನಿರಲುಬೇಕೆಂದು ಭಾವಿಸುವೆಯಾಗಿ। ಸಂದೇಹವೇಕಿನ್ನು। ಕುಂದಿಲ್ಲ ಪರಮಾನಂದ ಸ್ವರೂಪ। ನೀನೆಂದು ಪೇಳಿದ। ಸದ್ಗುರುವೇ ಪರಶಿವನು ॥೪॥ ನಿರುತವೀತನು ತಾನೆಂದು। ಭಾವಿಸಿಕೊಂಡು ಮರುಳನಾಗಿರಲು। ನೊಂದು ಪರತತ್ವ ಮರ್ಮದ। ಸರಣಿ ಬೋಧಿಸಿ ಯನ್ನ। ಗುರುಶಂಕರಾರ್ಯನೋಳ್। ಬೆರೆಯುವಂತೆಸಗಿದ। ಗುರುವೇ ಪರಶಿವನು ॥೫॥

೪೪

ಯಲ್ಲ ಪರಬ್ರಹ್ಮವೆನಬೇಕು। ಬೇರೊಂದಿಲ್ಲವೆಂಬುವ ದೃಢವಿರಬೇಕು। ಇಲ್ಲಲ್ಲಿ ತೋರುವುದೆಲ್ಲ। ಪರಬ್ರಹ್ಮನುಲ್ಲಾಸವೆಯುದೆನಬೇಕು॥ ಯಲ್ಲ ಪರಬ್ರಹ್ಮ ॥೧॥ ಪರಮ ನಾನೆಂಬುದರಿಯಬೇಕು। ಅದನರಿಯಬೇಕಾದರೆ ಗುರುಬೇಕು। ಗುರು ದೊರೆಯಲಾರದ ಚರಣದೊಳಗೆ। ತನ್ನ ಶಿರವನು ಮರೆಸದಿಟ್ಟಿರಬೇಕು॥ ಯಲ್ಲ ಪರಬ್ರಹ್ಮ ॥೨॥ ರೂಪುನಾಮಂಗಳ ಬಿಡಬೇಕು। ಅಧ್ಯಾರೋಪದೊಳದನು ಕಟ್ಟಿಡಬೇಕು। ಆ ಪರಂಜ್ಯೋತಿಸ್ವರೂಪನೆ ತಾನಾಗಿ। ಪಾಪಪುಣ್ಯಗಳೆಲ್ಲ ಕೆಡಬೇಕು॥ ಯಲ್ಲ ಪರಬ್ರಹ್ಮ ॥ ೩ ॥ ವಡಲು ನಾನೆಲ್ಲೆಂಬ ನುಡಿಬೇಕು। ತಾನು ನುಡಿದ ನುಡಿಗೆ ತಕ್ಕ ನಡೆಬೇಕು। ವಡಲಿನ ತೊಡಕನು ಬಿಡಸಿದ ಗುರುವರ। ನದಿಯೊಳಗಾ ವಡಲನಿಡಬೇಕು॥ ಯಲ್ಲ ಪರಬ್ರಹ್ಮ ॥ ೪ ॥ ತಾನೆಂಬನುಡಿಯ ಬದ್ಧಿಸಬೇಕು। ಸಮ್ಯಜ್ಞಾನದಿಂದದನು ಶಿದ್ಧಿಸಬೇಕು। ಮಾನಮೇಯಗಳೆಂಬುದೇನು ತೋರದ। ಸಚ್ಚಿದಾನಂದಭಾವ ಸಿದ್ಧಿಸಬೇಕು॥ ಯಲ್ಲ ಪರಬ್ರಹ್ಮ ॥ ೫ ॥ ಆರು ನಾನೆಂದು ಶೋಧಿಸಬೇಕು। ಮುಂದೆ ತೋರುವ ಜಗವ ಬಾಧಿಸಬೇಕು। ಬೇರೇನು ತೋರದೆ ಈರೇಳು ಲೋಕವ। ಮೀರಿದ ಪದವ ಸಾಧಿಸಬೇಕು॥ ಯಲ್ಲ ಪರಬ್ರಹ್ಮ ॥೬॥ ಜಾತಿ ಸೂತಕಭ್ರಾಂತಿ ಬಿಡಬೇಕು। ಮನವ ಸ್ವಾತ್ಮಾನುಭಾವದೊಳಗಿಡಬೇಕು। ಭೀತಿತೋರದೆ ಪರಿಪೂತನಾಗುತ। ತನುಜಾತಕರ್ಮಗಳನು ಸುಡಬೇಕು॥ ಯಲ್ಲ ಪರಬ್ರಹ್ಮ ॥೭॥ ವಂದಿಸುವರನು ಬಂಧಿಸಬೇಕು। ತನ್ನ ನಿಂದಿಸುವರಿಗೆ ವಂದಿಸಬೇಕು। ನಿಂದೆವಂದನೆಯೆಂಬ। ಬಂಧನವೆಲ್ಲದಾನಂದಭಾವದೊಳು ಹೊಂದಿರಬೇಕು॥ ಯಲ್ಲ ಪರಬ್ರಹ್ಮ ॥೮॥ ಆರುಹು ತನ್ನೊಳು ನೆಲಸಿರಬೇಕು। ಕಾಯಕರಣಕಾರ್ಯದೊಳೆಚ್ಚರಿರಬೇಕು। ಗುರುಶಂಕರಾರ್ಯನೋಳ್ ಬೆರದೇಕನಾಗಿ। ತಾ ಹೊರವಳಗೆಲ್ಲ ತುಂಬಿರಬೇಕು॥ ಯಲ್ಲ ಪರಬ್ರಹ್ಮವೆನಬೇಕು ॥೯॥

ಲಾಲಿಲಾಲಿ। ಮಾಯಾ ಲೋಲಲಾಲಿ। ಕಾಲಕರ್ಮವೆಲ್ಲ ನಿನ್ನ ಲೀಲೆ ಲಾಲಿ ॥ ಪ॥ ಸತ್ಯಲಾಲಿ ನಿಹತಾ ನಿತ್ಯಲಾಲಿ। ಮೃತ್ಯುದೇವಿ ನಿನ್ನಪಾದ ಭೃತ್ಯಲಾಲಿ ॥ ೧ ॥ ದೀಪಲಾಲಿ। ಘನಚಿದ್ರೂಪಲಾಲಿ। ತಾಪಕೋಪ ನಿನ್ನೊಳಧ್ಯಾರೋಪಲಾಲಿ ॥ ೨ ॥ ಪ್ರೇಮಲಾಲಿ। ಸುಖಸೀಮಲಾಲಿ। ಕಾಮಿತಾರ್ಥಕ್ಕೆಲ್ಲ। ನೀನೆ ಧಾಮಲಾಲಿ ॥ ೩ ॥ ನಿತ್ಯಲಾಲಿ। ಲೋಕಾಪತ್ಯ ಲಾಲಿ। ನಿತ್ಯಾನಿತ್ಯವೆಲ್ಲ ನಿನ್ನ ಕೃತ್ಯಲಾಲಿ ॥೪॥ ಪೂರ್ಣಲಾಲಿ। ಪಂಚವರ್ಣ ಲಾಲಿ। ವರ್ಣೋಪಾದಿಯಿಂದ ನೀ ಬಹುವರ್ಣಲಾಲಿ ॥೫॥ ಈಶಲಾಲಿ। ಕೋಶಾಪಾಶಲಾಲಿ। ಪಾಶವೆಂಟು ಕಳಿಯೆ ನೀ ಸರ್ವೇಶಲಾಲಿ ॥ ೬ ॥ ಕಂದ ಲಾಲಿ। ಗಳಿತ ಬಂಧಲಾಲಿ। ಸಂದುತಿಳಿದೊಡೆಲ್ಲ ನಿನ್ನಾನಂದಲಾಲಿ ॥ ೭ ॥ ದೇವಲಾಲಿ। ಪೂರ್ಣಭಾವಲಾಲಿ। ಭಾವಭಾವವರಿಯೆ ನೀನಿರ್ಭಾವಲಾಲಿ ॥೮॥ ಶರಣಲಾಲಿ। ಮಿಥ್ಯಾವರಣಲಾಲಿ। ಗುರುಶಂಕರ ಸತ್ಕರುಣಾ ಭರಣೋದ್ಧಾರಣಲಾಲಿ ॥ ೯ ॥

# ಮಹಾಪೂಜಾಕ್ರಮ—ಸೀಸಪದ್ಯ

ಶ್ರೀ ಸಚ್ಚಿದಾನಂದ ನಿತ್ಯನಿರ್ಮಲ ಪರಾಖಂಡವಸ್ತುವನು ಮೂಲವನು ಮಾಡಿ। ನಿರಘನಿರ್ಗುಣ ನಿತ್ಯನಿರುಪಮಿತ ನಿರ್ಮಾಯ। ನಿರತಿಶಯನೆಂದು ಧ್ಯಾನವನುಮಾಡಿ॥ ಪೂರ್ಣಮಂತರ್ಬಹಿಃ ಪೂರ್ಣಮೂರ್ಧ್ವಂಚ ಪರಿಪೂರ್ಣ ಮೆಂದಾವಾಹನೆಯನುಮಾಡಿ। ವತ್ಸರಾದ್ಯಂತಮಧ್ಯಾಂತರದಿ ವರ್ಷಿಸುವ ವರ್ಷಧಾರೆಯನು ಪಾದ್ಯವನುಮಾಡಿ। ನಿರ್ಝರಕಾಸಾರವರ। ನದೀನದನ ಮುದ್ರಾದಿಗಳನಭಿಷೇಕಜಲವಮಾಡಿ। ಅಷ್ಟಿಷ್ಟು ಯೆನಲಾಗದಷ್ಟು ಗಜಾಧಿಷ್ಠಿ ತಾಷ್ಟದಿಕ್ಕುಗಳ ವೇಷ್ಟನವಮಾಡಿ। ಗಂಧಗುಣಾಧಾರ ಬಂಧುರಾಶೇಷ ವಸುಂಧರೆಯನೆಲ್ಲ ಗಂಧವನುಮಾಡಿ। ತಾರಾಕಾಗ್ರಹರಾಶಿ ಪುಂಜರಂಜಿತ ಮಂಜುಳಾಕಾಶವನು ಪುಷ್ಪಮಾಲೆಮಾಡಿ॥ ಹರಿಹರ ಬ್ರಹ್ಮೇಂದ್ರ ಭೈರವವೀರ ಮೊದಲಾದನಾಮಗಳನಾಭರಣಮಾಡಿ। ಉತ್ಫುಲ್ಲಕುಸುಮಾಳಿ ಸೌರಭಸಂಭಾರ ಭರಿತಮಾರುತನ ಧೂಪವಮಾಡಿ। ತ್ರೇತಾಗ್ನಿ ಬಡಬಾಗ್ನಿ ದಾವಾಗ್ನಿಯೆಂಬ ಪಂಚಾಗ್ನಿ ಉರಿಗಳನು ದೀಪವನುಮಾಡಿ। ವಿವಿಧ ಫಲಭಕ್ಷ್ಯಭೋಜ್ಯಂಗಳೊಳಗಿನ ಸಾರತರ ಮಹಾರಸವನ್ನೈವೇದ್ಯವಮಾಡಿ। ಪ್ರಜ್ವಲಚಂದ್ರಭಾಸ್ಕರ ತಟ್ಟೀದ್ಗಣದೀಪ್ತಿಜಾಲವನು ನೀರಾಜವವನುಮಾಡಿ। ವಿವಿಧವರ್ಣಾಳಿಗಳನು ತಾಂಬೂಲಮಾಡಿ। ನೀನೇ ನಾನಾದೆನೆಂಬ ವಂದನೆಯನೀಡಿ। ವಿಪುಲಕೈವಲ್ಯ ವಿಂತೆಂಬ ಫಲವಬೇಡಿ। ಮುಕ್ತರಾಗುವರು ಗುರುಶಂಕರನೊಳು ಕೂಡಿ॥

ಜ್ಞಾನಿಯಾದೆನೆಂದು ಬರಿದೇಜ್ಞಾನವಿಲ್ಲಾದುಸುರಾಲವನು। ಜ್ಞಾನಿಯಹ ನೇಮಾನಾವಳಿದೊಡವನೇ . ಜ್ಞಾನಿಯು ॥ಪ॥ ಪಂಚಮಾದೀಯಲ್ಲಿಮೊಳದು ಪಂಚದಿಕ್ ಷಟ್ಕ್ರಿಯದಿಂಮೆರದು। ಪಂಚಧರ್ಮಾಶ್ರಯವಾಗಿರುವೀ ಪಂಚಾಂಗದಿ ಸೇರಿ। ಪಂಚರೂಗಾಮಾದಾನಿ ನಿಜವಕಳದೊಡವನೇ ಜ್ಞಾನಿಯು ॥೧॥
ಹಿಂದೆಯಿಲ್ಲದ್ದಲ್ಲವಾಗಿ। ಮುಂದಕ್ಕಿಲ್ಲದಿಲ್ಲವಾಗಿ। ಯಂದಿಗೂ ಇಲ್ಲವೆಂಬುವದು ಇಲ್ಲದೇಪೋಗಿ। ವಂದುಮತ್ತೊಂದಲ್ಲೆಂಬುದಳೋಳ್ ಹೊಂದದಿರುವೋ ಭಾವಾತನೋಳ್। ಹೊಂದಿ ನಿಶ್ಚಂಚಲನಾಗಿರ್ದೊಡವನೇ ಜ್ಞಾನಿಯು ॥೨॥

ಓಡುವನೊಳುದಿಸೀದನನ । ಕೂಡಿಮೂಡೀ ರೂಪಾದವನ । ಗೂಢಸತ್ವಾ ಸತ್ವಾಧಿಕದೋಳ್ ಸಂಭಾವಿಪುದೆಲ್ಲ ರೂಢದಿಂದಾವನದೃಶ್ಯತೆಗೆ । ಬೀಡುಗೊಂಡು । ಜ್ವಲಿಸುತಿಹುದೋ ನೋಡಲವನೇ ನಾನೆಂದರಿತೋಡುವನೇ ಜ್ಞಾನಿಯು॥೩॥ಸ್ಥೂಲವಿಲ್ಲಾದುಂಟಾದುಂಟು। ಮೂಲವಿಲ್ಲೆಂದು ಮೂಲವಂ ಮೇಲಿನೊಳಾಮೂಲ । ಮೂಲವಿಲ್ಲಾದುಂಟಾದುಂಟು । ಮೂಲಾಮೂಲ ವಿಲ್ಲೆಂದುಳಿದೊಡವನೇ ಜ್ಞಾನಿಯು ॥ ೪ ॥ ವಂದರೊಳ್ಮೂರಾಯಿತ್ತೆ ಮುಂದೋದರೋಳ್ಮೂರಾಗಿಲ್ಲ । ನ್ದೊಂದರಿಂ ಮೂರಾಯಿತಿದು ಬೇರೊಂದಾ ರಿಂದೆಂದು ಕುಂದು ತೋರಾದಂತೆ ತಿಳಿದು । ಸಂದುತೋರಾದಂತೆ ತಾನೇ ನಿಂದು । ನಿತ್ಯಾನಂದಾನಾದೊಡವನೇ ಜ್ಞಾನಿಯು ॥೫॥ ಇಂತು ಬಹಿರಂತರ ಗಳೊಳಗೆ ಭ್ರಾಂತಿಯುಳಿದು ವಂದಾಗಿಸುವ । ತ್ವಂತದಂಶರ್ಧ್ವಂಸದಿಂ ನಿರ್ಧ್ವಂಸಾ ಶದಿಂಕೂಡಿ । ಪಂಥವಳಿದು ಇದಮೆಂಬುದಂ । ತನ್ನಂತೆಯಾಗಿ ಗುರುಶಂಕರ ನೋಳ್ । ಚಿಂತೆಯಿಲ್ಲದೆರಕನಾದೊಡವನೇ ಜ್ಞಾನಿಯು ॥ ೬ ॥

ಲಿಂಗಪೂಜೆಯು ಮಾಡಿರೋ । ನಿಮ್ಮೊಳು ನಿಜಲಿಂಗಪೂಜೆಯ ಮಾಡಿರೋ ॥ ಪ ॥ ಅಂಗದೊಳು ಸಂಗಿಸದೆ ಗುಡಿಯೊಳು । ತಂಗದಲಿ ನಿಸ್ಸಂಗದಲಿ ಬಹಿ । ರಂಗಲಿಂಗವನುಂಗಿ ಮಂಗಳ । ಕಂಗಳಿಗೆ ಉತ್ತುಂಗ ವೆನಿಸುವ ॥ ಲಿಂಗ ॥ ಅ ॥ ಮಡಿಯೆಂಬ ತೊಡಕಿಲ್ಲದ । ಊರೂರಿನ ಗಿಡ ಬುಡಗಳ ಸೇರದ । ಈ ಜಡಪೂಜೆ ॥ ಗಡಿಯೆಡಲೆಡೆಕೊಡದ । ಭೂಲೋಕ ದೊಳಗಿನ । ಅಡವಿಮಡುಕಡಲುಗಳ ತೆಡಿಯೊಳಗಡಗಿರುವ । ಕೆಡುತನಗಳಿಲ್ಲದೆ ಉಡುಪುಮುಡಿವಡವೆಗಳ ಬಯುಸದ ॥ ವಡಲು ನಡೆತಡೆ ಬಿಡುಗಡಿಲ್ಲದ ॥ ಲಿಂಗ ॥ ೧ ॥ ಧಾನ್ಯಕ್ಕೆ ಗುರಿಯಾಗದ । ಸಕ್ಕರೆ ಹಾಲು ಜೇನುಗಳನು ಕೋರದ । ಶುದ್ಧೋದಕಸ್ನಾನಕ್ಕೆ ಶಿರವೇಯದ । ತೋರುವ ನಾನಾಮಾನ ಮೇಯುಗಳೆಂಬ । ತ್ರಿಪುಟವಿಧಾನ ಜಪತಪಮೌನು ತಿಸುಮಾನಸದಿ ಸುಳಿಯುದ ॥ ಲಿಂಗ ॥ ೨ ॥ ಮರೆಯೊಳು ನೆಲಸಿರದ । ಪ್ರಾಕಾರ ಗೋಪುರ ಮಂಟಪವ ಸೇರದ । ಅಕ್ಷತೆ ವಸ್ತ್ರಾಭರಣವಿಡಲು ಕಾಣದ । ಮೆರಸುರರ ಮನೆಯೊಳು ಶಿರಿಯು ನೆಲೆಗೊಂಡಿರಲು ಹರುಷದಿ । ನರರ ಭುಜಗಳನೇರಿ ಮನೆಮನೆ । ತಿರುತಿರುಗಿ ಕೊರಗದ ॥ ಲಿಂಗ ॥ ೩ ॥ ರೂಪುನಾಮುಗಳಿಲ್ಲದ । ಆರತಿ ನಂದಾದೀಪಂಗಳಿಗೆ ಕಾಣದ । ಕಲ್ಪಿಸುವಧ್ಯಾರೋಪಕ್ಕಾಧಾರವಾದ ।

ಛಿನ್ನಶಿಗ್ನೈವ ॥ ಧೂಪದೀಪಗಳೆಂಬ ಕರ್ಮದ ಲೇಪವಿಲ್ಲದೆ। ತ್ರಿಗುಣಂಗಳ ಸಂತಾಪಕ್ಕಾಸ್ಪದಕೊಡದೆ। ಘನಚಿದ್ರೂಪ ಸುಖಮಯವಾಗಿ ಬೆಳಗುವ ॥ ಲಿಂಗ ॥೪॥ ಹೊರವಳಗೊಂದೆಯಾಗಿ। ಅಂಬರದಂತೆ ಪರಿಪೂರ್ಣಾಖಂಡ ವಾಗಿ। ನಿತ್ಯಾನಂದಾಪರಿಮಿತನಾದಿಯಾಗಿ ಬೇರೇನು ತೋರದ। ನಿರುಪಮಿತ ನಿರ್ಗುಣ ನಿರಂಜನ। ನಿರತಿಶಯನಿರ್ಮೋಹಮೆನಿಸುವ। ಪರಮಗುರುಶಂಕರನ ಚರಣದಿ ಬೆರೆತ ಗುರುಪುತ್ರನಿಗೆ ಕಾಣುವ। ಲಿಂಗಪೂಜೆಯ ಮಾಡಿರೋ ॥೫॥

## ಉರುಟಣೆ ಹಾಡು

ಜಯಗುಣಗಂಧಾತೀತ ಜಯಜಯನಾಮಾಕೃತಿರಹಿತ। ಜಯನಿಗ ಮಾವಳಿವಿನುತ ಜಯ ಜಯ ಜಯ ಜಗದ್ಭರಿತ ॥ಪ॥ ಪರಮಾಖಂಡಾಕಾರ ನಿತ್ಯನಿರವಧಿಕಾಶ್ರಯದೂರ ॥ ಉರುತರಮಾಯಾಧಾರ। ನೀನು ವರಸುಖಾ ಸಾರ ॥೧॥ ಶುದ್ಧಮಾಯೆಯದಿರಿಸಿ ಜಗದುದ್ಧಾರನೆಂದೆನಿಸಿ। ಸಿದ್ಧಾರಾಧ್ಯತೆ ಧರಿಸಿ। ನೀಪ್ರಸಿದ್ಧನಾಗಿರುವೆ ॥೨॥ ಉಳದಾವಿದ್ಯದಿ ನಿಂದಿ ನಾನು ಮಲಿನಾ ಜೀವನು ಯಂದೆ। ಬಳಲಿಜನ್ಮದಿನೊಂದೆ। ನೀನು ಹಲವೆನಿಸಿನಿಂದೆ ॥ ೩ ॥ ಪಾಪ ನಿನ್ನೊಳಗಿಲ್ಲ। ಪುಸಿರೂಪು ನಾಮುಗಳಿಲ್ಲ। ನೀಪುಟ್ಟಿದವನಲ್ಲ। ಅಧ್ಯಾ ರೋಪವಿದೆಲ್ಲ ॥ ೪ ॥ ಸುರನರರೋಗನಲ್ಲನೀನು। ಗರುಡಕಿನ್ನರನೆಲ್ಲ ಭರಣ ನಿನ್ನೊಳಗಿಲ್ಲ ಈ। ಶರೀರ ನೀನಲ್ಲ ॥ ೫ ॥ ದೇಹವೆ ನಾನೆಂದರಿತೆ। ನಿನ್ನ ಸೋಹಂಭಾವವಮರೆತೆ। ದೇಹಾರ್ಥಂಗಳಕೊರತೆ। ಬಂಧುಮೋಹದೊಳು ಬೆರತೆ ॥ ೬ ॥ ಪರಮಾನಂದದೊಳಿರದೆ ನಿನ್ನ ಪರಚಿದ್ಭಾವವಮೆರದೆ। ಕರಣಕಾರ್ಯದಿ ಬೆರದೆ। ನಿಜಗುರುಮತವ ತೊರದೆ ॥೭॥ ಮರವೇನಿನ್ನೊಳಗಿಲ್ಲ। ನಿನ್ನರವಕಂಡವರಿಲ್ಲ। ಪರಮಾರ್ಥವಿದಮಿದನೆಲ್ಲ। ಗುರುಶಂಕರನೋರ್ವ ಬಲ್ಲ ॥ ೮ ॥

ಲಾಲಿ ನಿಜತತ್ವವನು ಮರತಿರುವ ಕಂದ। ಲಾಲಿಕೋಟಿಸ್ಥನನು ತಿಳಿಯುವದೆ ಚೆಂದ। ಲಾಲಿ ॥ ಪ ॥ ಪಂಚಲಕ್ಷಣಮೂರ್ತಿಯು ಕಾಣೆನೆಂದೆ। ಪಂಚಕೋಶಗಳೆಂಬ ಪಂಜರದಿನಿಂದೆ। ಸಂಚಿತಾಗಾಮಿಗಳು ತೊಡಗೆ ನಿನ್ನಿಂದೆ। ಪಂಚದುಃಖದಿ ಸಿಲುಕಿ ನೊಂದೆ। ನೀಹಿಂದೆ। ಲಾಲಿ ॥ ೧ ॥ ಜಾತಿಕುಲ

ವರ್ಣಾಶ್ರಮಗಳೆಂಬುದೆಲ್ಲ। ಜಾತಮಾದೀ ತೋರತನುವಿನೊಳಗೆಲ್ಲ। ಖ್ಯಾತಿಯಿಂ ಕಲ್ಪಿತವಿದೊಂದುನಿಜವಲ್ಲ। ಆತ್ಮನೀನಿರ್ದಿಸಂಪರ್ಕ ನಿನಗಿಲ್ಲ। ಲಾಲಿ ॥ ೨ ॥ ಅಂಧ್ಯಬಧಿರತೆಯೆಂಬ ಧರ್ಮಂಗಳೆಲ್ಲ। ಹೊಂದಿಹುದುನೇತ್ರಾದೀದಿಂಧ್ರಿಯದೊಳೆಲ್ಲ ಸಂದೇಹವಿದು ಮನಸಿಗಾಯ್ತು ನಿನಗಿಲ್ಲ। ನಂದುನಾನೆಂಬುದಂ ಮಿನದುನಿನದಲ್ಲ। ಲಾಲಿ ॥೩॥ ಆರುನಾಲ್ಕರಕೂಟದಿಂದ ಬೇರೊಂದುತೋರೆ ಸಂಸಾರಭಾವಪೊತ್ತು ನೀನು। ಬೇರಿರುವುದನು ಕಾಣದದೆನ ನಿಜವೆಂದು ಸೇರಿದ್ದೈ ಮಾಂಸಮಯಕಾಯದೊಳುಬಂದು। ಲಾಲಿ ॥ ೪ ॥ ಪರಮಾರ್ಥಮಲ್ಲದು ಭಯದಭಾವಪೋಗಿ। ಪರಿಹರಿಸಲಾಗದವನೊಳಗೆ ಪಂದಾಗಿ। ಪರಿಪೂರ್ಣ ಭಾವ ನಿನ್ನೊಳಗೆ ಇಂಪಾಗಿ। ಹರನಾಗು ಗುರುಶಂಕರನೊಳೇಕನಾಗಿ ॥೫॥

ಅಂತಿರುವ ನಿಂತಿರುವ ನೆಂತಿರುವನೆಂದ್ಯಾಕೆ ಚಿಂತಿಪುದು ಯೋಗಿ। ತನ್ನಂತೆ ತಾನಿರುವ ಧರ್ಮಕರ್ಮವಬಿಟ್ಟು ಕುಲಶೀಲವ ಕೆಟ್ಟು। ನಿರ್ಮಲನು ನಾನು ಯಂಬುವನೆಂತಿರುವ ಮರ್ಮವಿಜ್ಞಾನಹೀನರಾಗಿ। ಮಾಂಸಮಯ ಚರ್ಮದೊಳು ಕಲ್ಪಿತಮಿದೆಂದು ತಿಳಿದಿರುವ ॥೧॥ ಹರನ ಪೂಜಾವಾಹನಾದಿ ಸೇವೆಯನೆಲ್ಲತೊರದು ನಾಸಕೃತಿಯಂಬುವನೆಂತಿರುವ। ಪರಿಪೂರ್ಣವರಪರಂ ಜ್ಯೋತಿಗಾವಾಹನೆಯ। ವಿರಚಿಸುವೆನೆಂಬುವನ ನೋಡಿ ನಗುತಿರುವ ॥ ೨ ॥ ಕಾಮುಶುಚಿಯಿಲ್ಲ ದೈವಧ್ಯಾನವಿಲ್ಲವೀ। ನ್ಯಾಯವರಿಯದೆ ಯೋಗಿಯೆಂಬ ನೆಂತಿರುವ। ಧ್ಯೇಯವಸ್ತುವಿನ ಪೂರ್ವಾಪರವತಿಳಿದು ನಿರ್ಮಾಯಿತನಾಗಿ ಆನಂದ ದೊಳಗಿರುವ ॥೩॥ ನಾಡೆಲ್ಲ ತಿರುಗಿ ಕಾಡುತ ಬೇಡುತಿರ್ದು। ಆರೂಢನಾಮ ನೆಂಬ ಯೋಗೀಶನೆಂತಿರುವ। ಕೂಡಿಕಾಷ್ಟವನು ಕಾಷ್ಟವನೆಲ್ಲ ತನ್ನಂತೆಮಾಡಿ। ಬೆಳಗುತ್ತಿರುವವಹ್ನಿಯಂತಿರುವ ॥೪॥ ಯಲ್ಲರೊಡನಾಡಿ ಯಲ್ಲರಕೂಡುತಿವರ ಸಂಗಿಲ್ಲವೆನಗೆಂಬ ಯೋಗೀಶನೆಂತಿರುವ। ಹಲ್ಲಿನೊಡಗೂಡಿ ಹಲ್ಲಿಗೆ ಸಹಾಯ ಮಾಡಿ। ಹಲ್ಲಿನೊಳು ಸಿಲುಕದಿಹ ಚಿಹ್ನೆಯಂತಿರುವ ॥ ೫ ॥ ಆಶನವಸನ ವ್ಯಸನದೊಳಗೆ ಮುಳುಗಿರ್ದು। ನಿರ್ವ್ಯಸನಿನಾನೆಂಬ ಯೋಗೀಶನೆಂತಿರುವ ॥ ೬ ॥ ಕಸರೊಳಗೆಪುಟ್ಟಿ। ಕೆಸರೊಳಗೆ ಮುಳುಗಿ। ಕೆಸರೊಡನಿಬೆಸಗದಿಹ। ಕುಂಬಾರ ಹುಳದ ಪರಿಯಿರುವ ಪೂರಿಸದೆ ಶಿಖರಾಗ್ರವೇರದೇ ತಾರಕದ। ಸಾರವರಿಯದೆ ಯೋಗಿಯೆಂಬನೆಂತಿರುವ ಪೂರಕದಿ। ತಾರಕದಿ ಶಿಖರಾಗ್ರದಲ್ಲಿ ತಾಸೇರಿ ಯಲ್ಲಕ್ಕು ಮಿತಿಮೀರಿನಿಂತಿರುವ ॥ ೭ ॥ ಲಲನೆಯರ ಸುತಹಿತರಕೂಡಿ

ವಡನಾಡಿ ನಿರ್ಮಲನು ನಾನೆಂಬ ಯೋಗೀಶನೆಂತಿರುವ। ಜಲದೊಳಗೆ ಜನಿಸಿ ತಾ ಜಲದೊಳಗೆ ಮುಳುಗಿರ್ದು। ಜಲವಸೋಕದ ಜಲಪತ್ರದಂತಿರುವ ॥ ೮ ॥ ಶರೀರವನು ಧರಿಸಿ ಎಲ್ಲರಪರಿಯೊಳುಂಡುಟ್ಟು। ಚರ್ಚ್ಚಿಸಿನಾಮುಕ್ತನೆಂಬುವ ನೆಂತಿರುವ ಮರವೆಯನು ಕಳೆದು। ನಿಜಪರಸುಖದಲಿ ಬೆರದು। ಗುರುಶಂಕರ ನೋಳ್ ತಾನೇಕವಾಗಿರುವ ॥ ೯ ॥

ಯಲೆದೇಹವೆ ನಿನ್ನೊಳು ನಾಸೇರಲು। ಮುಳುಗಿಸಿಯನ್ನನು ನೀಬೆಳದೇ ಕಳಿಯಲು ನಿನ್ನನ್ನು ಘನಸುಖಮಯನಿರ್ಮಲನಾಗುತ ನಾಬೇರುಳದೇ। ಪೇಳಲು ಮನಸಿಗೆಗೋಚರವಾಗಿಹ ಲೀಲೆಗಳೆಲ್ಲ ಯನಗಾಯ್ತು। ಬೋಳಿಸಿ ತಲೆಯನು ಛಳಿಯೊಳು ಮುಳುಗುವ ಕೋಳಿಗಳೆಲ್ಲ ನಿನಗಾಯ್ತು ॥ ೧ ॥ ಯಂದಿಗು ಕುಂದನು ಹೊಂದದ ಬ್ರಹ್ಮಾನಂದದ ಯೋಗವು ಯನಗಾಯ್ತು। ನಿಂದನ ವಂದನಬಂಧನ। ಸಂಧ್ಯಾವಂದನ ರೋಗವು ನಿನಗಾಯ್ತು ॥ ೨ ॥ ಸತ್ಯನು ಚಿದ್ರೂಪನು ಆನಂದನು ನಿತ್ಯಾಖಂಡನು ನಾನಾದೆ। ಮಿಥ್ಯವು ಜಡವೀದುಃಖವು ಮತ್ತವ ನಿತ್ಯವು ಖಂಡವು ನೀನಾದೆ ॥೩॥ ನಿರುಪಮನಿರ್ಗುಣನಿತ್ಯನಿರಾಶ್ರಯ ವರಚಿನ್ಮಾತ್ರನುನಾನಾದೆ। ಕುರುಡನು ಕುಂಟನು ಬಧಿರನು ಭಂಟನು ತಿರುಕನು ಮೂಗನು ನೀನಾದೆ ॥ ೪ ॥ ಭೌತಿಕಪಾತವಿಲ್ಲದ ತ್ರಿಗುಣಾತೀತಶ್ರೇಷ್ಠನು ನಾನಾದೆ। ಸೂತಕ ಬಂದರೆ ಕುಲದಲಿ ಕೂಡದ ಜಾತಿಭ್ರಷ್ಟನು ನೀನಾದೆ ॥೫॥ ಕರ್ಮಕೆ ಸಿಲುಕದ ನಿಜಸುಖಪದವಿಯ ಧರ್ಮವು ಯನ್ನೊಳಗುಂಟಾಯ್ತು। ಮರ್ಮವನರಿಯದೆ ಜಾತಿಗೆ ಕೊರಗುವ ಕರ್ಮವು ನಿನ್ನೊಳಗುಂಟಾಯ್ತು ॥೬॥ ಶುದ್ಧಚಿದಾತ್ಮನು ನೀನೆಂದುಸುರುವ ವಿದ್ಯಕೂಟವು ಯನಗಾಯ್ತು। ವದ್ದರೆ ವಬ್ಬನಪಾತಕವೆಂಬೀ। ವೃದ್ಧದಗೂಟವು ನಿನಗಾಯ್ತು ॥ ೭ ॥ ಹೊರವಳ ಗಾಗುವಮರವೆಯರಕಾವ್ಯ। ನರಿಯುವ ಸಾಕ್ಷಿಯು ನಾನಾದೆ। ಪರಿಪರಿ ತೀರ್ಥದಿ ಮುಳುಗುತಧರೆಯನು। ತಿರುಗುವದೀಕ್ಷಿತ ನೀನಾದೆ ॥ ೮ ॥ ಕುಲ ಚಲವೆಂಬೀ ಹೊಳೆಯಿಲ್ಲದ ನಿರ್ಮಲತನವೆನಗಾಯ್ತು। ಹೊಲೆಯ ವಿಪ್ರನು ಶೂದ್ರನುಯೆಂಬುವ ಕುಲನೀಲದ ಹೊಳೆ ನಿನಗಾಯ್ತು ॥೯॥ ತೆರೆಕೊರೆಯಿಲ್ಲದ ಖಂಡಾಕಾರದೊಳಿರುವುದು ಯನ್ನಯ ನಡೆಯಾಯ್ತು। ಅಂದಿಂದೆನ್ನದೆ ಯೆಂದೆಂದಿಗು ವಂದಂದದೊಳಿರುವುದು ಯನಗಾಯ್ತು। ಹಂದಿಯೆ ಮೊದಲಾದಾಕಾರಗಳನು ಹೊಂದುತ ಕೆಡುವುದು ನಿನಗಾಯ್ತು ॥ ೧೦ ॥

ಹಿತರೊಳಗೆ ಹಿತ ನೀನೆಂದುಸುರವಶ್ರುತಿಸಮ್ಮತನೆನದಾಯ್ತು । ಸತತೋಪಾಸ ಕ್ಷೇತ್ರನಿವಾಸ ವ್ರತಗಳು ನಿನಗಾಗುಂಟಾಯ್ತು ॥ ೧೧ ॥ ರಾಗದೊಳಿಲ್ಲದ ಮಾಯಾವಿಷಯದ ಭೋಗವ ಬಯಸಲು ನೀಬಂದೆ ॥ ಶ್ರೀ ಗುರುಶಂಕರನಡಿ ಗಳಿಗೀ ಶಿರಬಾಗಿದ ನಿಮಿಷಕೆ ನೀಬಂದೆ ॥ ೧೨ ॥

ಬಿಡುಬಿಡು ಸಂಸಾರಸುಖವಿಲ್ಲ । ಅಲ್ಲಿ । ಹುಡುಕಿನೋಡಿದರೇನು ಹರುಳಲಿಲ್ಲ । ವಡಲಿನ ತೊಡಕನುಕೆಡಿಸದೆ ಮುಕ್ತಿಯುಪದೇವನೆಂಬುವನೀಗೆ ಪೆಸರಿಲ್ಲ । ಬಿಡುಬಿಡು ॥ ಪ ॥ ಮಡದಿಮಕ್ಕಳನೆಚ್ಚಿ ಕೆಡಬ್ಯಾಡ । ಈ ಪೊಡವಿ ಸುಖವು ನಿಜವೆನಬ್ಯಾಡ । ಕಡೆಗೆ ನೀಬಿಡುಕುತ । ಕಡುಕುಂಭೀಪಾಕದ ಮಡುವಿನೊಳಗೆವಡಲಿಡಬ್ಯಾಡ । ಸಿರಿತನದೊಳಗೆ ಸುಸ್ಥಿರವಿಲ್ಲ ಮುಂದೆ । ನರಜನ್ಮವೆಂದಿಗು ಬರದಲ್ಲ । ತರುಣಿ ಮರುಳಾಗಿ ನರಕಕ್ಕೆ ಗುರಿಯಾಗಿ । ಕುರಿನರಿಯಾಗಿ ಪುಟ್ಟುವೆಯಲ್ಲ। ಉಂಡನ್ನವಾದರು ನಿನದಲ್ಲ। ಬೆಂದುಬೆಂಡಾಗಲದು ಫಲವಿಲ್ಲ । ಕಂಡವರೊಡವೆಗೆ ಗಂಡನಾನೆಂದುರಿಗುಂಡಿಯೊಳಗೆ ಬೀಳುವಿಯಲ್ಲ । ಶರೀರವ ನೋಡಿ ಹಿಗ್ಗುವೆ ಇಲ್ಲಿ । ನಿನ್ನ ಕೊರಳ ಕೊಯ್ಯುವುದಿದೆ ಪರದಲ್ಲಿ। ಅರಿಯದೀ ತತ್ವವ ಮರತು। ನಿಜತತ್ವವ ತಿಳಿಯದೆ ನಾನಾಯೋನಿಗಳಲ್ಲಿ ಸಿರಿಯಸಂಪಾದಿಸಿ ಫಲವಿಲ್ಲ। ಮುಂದೆಮರಣವಾಗುವುದು ತಪ್ಪುವದಿಲ್ಲ ನರಕುರಿಗಳು ಇದನರಿಯದೆ ಮೃತ್ಯುವಿನುಯಳಿಗೆ ಕೊರಳನೊಡ್ಡುವರಲ್ಲ । ಹಿಂದಿದ್ದ ತನ್ನವರಿಗಿಲ್ಲ। ಇನ್ನು ಮುಂದೆ ಪುಟ್ಟುವರು ನಿಲ್ಲುವರಲ್ಲ । ಸಂದೇಹವೇಕಿನ್ನು ಯಂದಿಗಾದರು ಮೃತ್ಯು ಬಂದುಕೊಲ್ಲದೆ ಇಲ್ಲಿಬಿಡದಲ್ಲ । ಗರಿಕಿಸುತಿಲ್ಲಿ ಕಣ್ಣೊಳುತಾನು ನಾನಾ ಪರಿಪರಿಯೊಳುಗುರುಳಿಸಾಯುವರನು ಸ್ಥಿರಬದುಕೆನದೆಂದು । ಶಿರವೆತ್ತಿ ತಿರುಗುವ । ನರನಿಗು ಕುರಿಗು ಭೇದಗಳೇನು । ಹಣವಿರೆ ನೀವಳ್ಳಿ ಗುಣವಂತ ನೀನೆ । ಹಣವಿಲ್ಲದಿದ್ದರೆ ಕಡೆ ಹೆಣಕ್ಕಿಂತ ನೊಣಗಳಾದರು ಬಂದು । ಹೆಣವ ಮುತ್ತುವದಿಲ್ಲ । ಹಣವಿಲ್ಲದವನು ನಿರ್ಗುಣವಂತನರಿಯಲು । ಮಾಂಸಕೀವಿನ ಬೊಂಬೆ ಅದರೊಳಿರುವ ಸಂಪತ್ತು ದುಃಖದ ಕೊಂಬೆ । ಕರುಳುರಕ್ತಗಳಿಂದ ಬೆರೆತಿಹ ಶ್ಲೇಷ್ಮ ಪಂಜರಕಾಗಿ ಬರಿದೆ ನೀಹೊಡಕೊಂಬೆ । ಮಿಡುಕುವೆ ಮಡದಿ ಮಕ್ಕಳಿಗೆಲ್ಲ। ನಿನ್ನ ವಡಲೆ ನಿನ್ನೊಡನೆ ಬರುವದಿಲ್ಲ । ಹುಡುಕಿ ದೂತರು ನಿನ್ನ ಪಿಡಿದು ಗುದ್ದೆಳೆವಾಗ ಹೊಡೆದಾಡಿ ಬಿಡಿಸುವರ್ಯ್ಯಾರಿಲ್ಲ। ಹೋರಿಸಂಪಾದಿಸುವವ ಮಾಣ । ಅದನು ಧಾರುಣಿಯೊಳು ಹೂಣಲತಿಜಾಣ । ತೋರಿಕೆಡುವ ಪ್ರಾಣ

ಹಾರಿಪೋಗಲು ಆದನ್ಯಾರಿಗಾಗುವದೊ ಯುಂಬುದಕಾಣ । ನಿಲ್ಲುವರು ಸುಡುಗಾಡಲ್ಲಿ। ನಿಲ್ಲಲು ಬೇರೆ ದಿಕ್ಕಿಲ್ಲದೆ ನೀನೊಬ್ಬ ನಿಲ್ಲುವೆ ಮುಂದೆ ನರಕದಲ್ಲಿ! ಮಾನಾಭಿಮಾನ ಬಿಡಲಿಲ್ಲ ಮೊದಲು । ತಾನಾರುಯುಂಬುದೆ ಗೊತ್ತಿಲ್ಲ। ಹಾನಿತೋದ ಸಮ್ಯ ಜ್ಞಾನವಿಲ್ಲದೆ ಬರಿಸ್ನಾನಮಾಡಿದರೇನು ಫಲವಿಲ್ಲ। ಶರೀರದೊಳಭಿಮಾನಬಿಡಬೇಕು ಮುಂದೆ । ಮರಣದೊಳಗೆ ದೃಷ್ಟಿ ಇಡಬೇಕು। ಗುರುಶಂಕರಾರ್ಯನ ಚರಣವಪಿಡಿದು ತನ್ನಿರವ ಕಂಡು ಸುಖಿಸಬೇಕು ॥

ಮಂಗಳಂ ಗುರುಶಂಕರ ಶುಭ । ಮಂಗಳಂ ॥ ಪ ॥ ಸಂಗರಹಿತ ಮುನಿ ಪುಂಗವ ವಂದಿತ ॥ಮಂಗಳಂ॥ ಗಂಗಾಸಿತೋಭಯು । ಸಂಗಮೋದ್ಭಾಸಿತಾಂತ । ರಂಗನಿರ್ವಿಷಯಕ । ಶೃಂಗಾಟಕಮಂದಿರಸಂಗತ । ಶುಭ ॥ ಯಂದಿಗು ಪರಿಯುದ। ಬಂಧದೊಳಿರುವೆನ್ನ । ಸಂದೇಹಂ ಹರಿಸುತ । ಕುಂದದ ಬ್ರಹ್ಮಾನಂದದಿ ಹರಸಿದೆ । ಮಂಗಳಂ ॥ ಕಾಲವಳಿಯುವ । ರೀತಿಯುನರಿಯದೆ । ಭೀತಿಯಿಂ ತಪಿಸುವ । ಪಾತಕಿಯುನು ಪರ । ಮಾತ್ಮನ ಮಾಡಿದೆ । ಮಂಗಳಂ ॥ ರೂಢ ಮಾಗಿರುವೆನ್ನ । ಗೂಢವನರಿಯದೆ । ನಾಡೆಲ್ಲ ಬಳಸಿದ । ಮೂಢನ ಪರಮಾ ರೂಢನ ಮಾಡಿದೆ । ಮಂಗಳಂ ॥ ತಾಮಸವರ್ಜಿತ । ಕಾಮಿತದಾಯಕ । ಸೋಮಶೇಖರಭ । ಕಾಮಹರಣ ಶಿವರಾಮವಿನುತಪದ । ಮಂಗಳಂ ಗುರುಶಂಕರ ಶುಭ । ಮಂಗಳಂ ॥

ಇತಿ ಶ್ರೀಮದುಭಯ ವೇದಾಂತ ವಿದ್ಯಾಪಾರಾವಾರಾ ಪಾರೀಣ ಪರಮಹಂಸ
ಪರಿವ್ರಾಜಕಾಚಾರ್ಯವರ್ಯ ಶ್ರೀಮನ್ನಿಜಾನಂದ ಸದ್ಗುರುವರೇಣ್ಯಚರಣ
ಸರಸೀರುಹ ಭೃಂಗಾಯಮಾಣ ಮಾನಸ ಶಿವಾನಂದ
ವೇದಾಂತ ಶಿವರಾಮಶಾಸ್ತ್ರಿ ವಿರಚಿತ

# ದೇವೀ ಸ್ತೋತ್ರ

## ರಾಜರಾಜೇಶ್ವರೀ ಸ್ತೋತ್ರ

೧

ಪಾಲಿಸು ಪರದೇವತೇ । ಶ್ರೀ ಲಲಿತೇ । ಪಾಲಿಸು ಪರದೇವತೇ । ಫಾಲ ನಯನನು ಕುಣಿಯುತಿರೆ । ಹರತಾಳಗಳ ಹಾಕುತ್ತಲಿರೆ ಸುರ । ಜಾಲ ನಿನ್ನನು ಪೊಗಳುತಲಿರಲೀ ಲೀಲೆಯೊಳು । ನೀನೆನ್ನ ಮರಿಯದೆ ಪಾಲಿಸು ॥ಪ॥

ಪಂಚತನ್ಮಾತ್ರೆಗಳು ಬಾಣಗಳುವಿ । ರಿಂಚೀಶವಿಷ್ಣ್ವಾದಿಗಳ್। ಕೂತಿಹ ನಿನ್ನ । ಮಂಚಕ್ಕೆ ಪಾದಂಗಳು । ನಿನ್ನೊಳಗೆ ನೀನೆ । ಪಂಚಭೂತಗಳಾಗಿ ಇದರೊಳು। ಪಂಚಕೋಶಗಳಿಂದ ವಿವಿಧ ಪ್ರ । ಪಂಚರೂಪವಧರಿಸಿ ಬೆಳಗುವೆ। ಪಂಚಮೆಯ ಸಂಚಿತವ ಕಳದು। ಪಾಲಿಸು ಪರದೇವತೇ ॥೧॥ ಅಷ್ಟಸಿದ್ಧಿ ಗಳೆಂಬಿವು । ನಿನ್ನಯಪಾದಾಂ। ಗುಷ್ಠದೊಳು ಕಾದಿಹವು। ಸೃಷ್ಟಿಗಳೆಲ್ಲ ದೃಷ್ಟಿಯೊಳಡಗಿಹವು। ಕಾಮೇಶ್ವರನಸಹಿತ। ಪಟ್ಟದರಸಿಯೆ। ನಿನ್ನ ಕೃಪೆ ಯಳ್ಳಷ್ಟು ಸೋಕಲು ನರನು ಬ್ರಹ್ಮನ । ಪಟ್ಟವನು ಪಡಿಯುವನು ನಿನ್ನೊಳ್ ಶ್ರೇಷ್ಠರಿನ್ನಾರುಂಟು ಜಗದೊಳು । ಪಾಲಿಸು ॥೨॥ ವಾಣೀಲಕ್ಷ್ಮಿಗಳೀರ್ವರು । ಚಾಮರಗಳಂ । ಮಾಣದೆಬೀಸುವರು । ಪೊಗಳುತ ನಿನ್ನಿಂದ್ರಾಣಿಗಳು ಕುಣಿಯು ವರು । ತ್ರಿಪುರೇಶಿನನ್ನೀ। ಪ್ರಾಣಮನತನುವೆಲ್ಲ ನಿನ್ನದುಕಾಣೆ। ನಿನಗಿಂತನ್ಯವನು ನಾಕಾಣೆ । ಸದ್ಗುರು ಶಂಕರನ ಪಾದದಾಣೆ ಶಂಕರದಾಸಕಾಣೆ । ಪಾಲಿಸು ॥೩॥

೨

ಯಾತಕೆ ಮರೆಮಾಚುವೆ ನಿಜರೂಪವ। ಪಾತಕಿ। ಗದತೋರಿಸು ತಾಯೇ । ಭೀತನು ನಿನ್ನಡಿಗಳಪಿಡಿದೆನುಸಂ । ಪ್ರೀತಿಯನಿಡು ಶಂಕರ ಜಾಯೇ ॥ ಪ ॥

ಮಾತಿನ ದೇವತೆಗಳು ಬಹಳುಂಟವ । ರೇತಕೆ ನಿನ್ನ ಕಲಾತ್ರಿತರು । ಮಾತೆಯತೋರೆನುತ ನಿನ್ನಡಿಗಳ । ದೂತರು ಬೇಡುತ ಕಾದಿಹರು । ಯಾತಕೆ ॥೧॥ ಅಜಹರಿರುದ್ರೇಶ್ವರರಿಗೆ ಹೆಚ್ಚಿದ । ನಿಜದೇವರು ಲೋಕದಳಿಲ್ಲ। ಭಜಿಸುತ

ಮಂಚದಪಾದಗಳಾಗಿಹ ಅಜಹರಿರುದ್ರಾದಿಗಳೆಲ್ಲ। ಯಾತಕೆ ॥ ೨ ॥ ಪುತ್ರನು ನಾನಿನ್ನಡಿಗಳಪಿಡಿದು ॥ ಮಿತ್ರತು ಸಂಶಯಬಿಡುಬೇಗ। ಮಿತನು ನಿನ್ನಯ ಭಕ್ತರಿಗದರಿಂ। ಗಾತ್ರನುಕೃಪೆಮಾಡುವುದೀಗ। ಯಾತಕೆ ॥ ೩ ॥ ಶಕ್ತರು ಯೆಂಬುವ ದೇವರುಗಳೊಳಿಹ। ಶಕ್ತಿಯು ನಿನ್ನದು ಜಗದಂಬ। ಭಕ್ತನು ಕೇವಲ ನಿನ್ನಡಿಗಳನು। ಶಕ್ತಿಯನಿಡುಯಸ್ಸೊಳು ತುಂಬಿ। ಯಾತಕೆ ॥ ೪ ॥ ಪಂಕಜಮುಖಿ ಪರಮಾತ್ಮನರಾಣಿ ಪ। ರಾಂಕುಶಧರೆನೀಸದಯದಲಿ। ಶಂಕರೆಯು ಬಿಟ್ಟಾನಂದದಿವಿಹರಿಸು। ಶಂಕರದಾಸನ ಹೃದಯದಲೀ। ಯಾತಕೆ ॥೫॥

೩

ಮಾತೆ ಮಂಗಳದೇವತೆ। ಭೀತನಮೇಲೆ। ಪ್ರೀತಿಯನೀಡು ಲಲಿತೆ। ಪೂತೆಪಾಲಿತಭಕ್ತವ್ರಾತೆ ಲೋಕತ್ರಯವಿಖ್ಯಾತೆ। ಶಂಕರಮನಃಪ್ರೀತೆ ಭೂದರ ಜಗತೆ। ಮಾತೆ ಮಂಗಳದೇವತೆ ॥ ಪ ॥

ದೀನರಕ್ಷಳು ನೀನು। ದೀನರೊಳತಿ। ದೀನನಾಗಿರುವೆ ನಾನು। ಕಾಣೆ ನಿನ್ನನು ಬಿಟ್ಟರನ್ಯದೈವವನಾನು। ಪ್ರಾಣಧಾರಣೆಗನ್ನಪಾನವಕೊಡು ನೀನು। ಮಾತೆ ಮಂಗಳ ॥ ೧ ॥ ಮೂಢನಾಗಿರುವೆ ನಾನು। ಔದಾಸೀನ್ಯ। ಮಾಡ ಬ್ಯಾಡಮ್ಮ ನೀನು। ಆಡುವ ಮಗನವನಾಡೋ ಮಾತನುಕೇಳು। ರೂಢಿಯಿಂದ ಭಯವನೀಡಲು ಪ್ರೀತಿಯ ತಾಳು। ಮಾತೆ ಮಂಗಳ ॥ ೨ ॥ ಶೋಕಸಾಗರ ವಾಸನ। ಪ್ರೀತಿಯನಿಟ್ಟು। ಸಾಕು ಶಂಕರದಾಸನ। ಯಾಕಮ್ಮ ಸಂಶಯ ನೂಕಿನ್ನು ನಿಶ್ಚಯ। ಪಿಕವೇನ್ನುತ ನಿನ್ನೊಳೇಕವಾಯಿತು ಕಾಯ। ಮಾತೆ ಮಂಗಳದೇವತೆ ॥ ೩ ॥

೪

ಪಾಲಿಸು ಪಾಲಿಸು ಜಗದಂಬ। ಬಾಲನ ಲಾಲಿಸಿ ಲಲಿತಾಂಬ ॥ ಪ ॥ ಅರಸುತಲಿರ್ದೆನು ಮತಿಗೆಟ್ಟು। ಮರುಳನನುನಿನ್ನಂಘ್ರಿಯಬಿಟ್ಟು ॥ ೧ ॥ ಮರೆಯುವೆ ನಾ ಹಮ್ಮನು ತೊಟ್ಟು। ಹರಿಸದ ನೀನಭಯವ ಕೊಟ್ಟು ॥೨॥ ಅಜಹರಿರುದ್ರರು ಸಮರಲ್ಲ। ಭಜಿಸುತ ನಿನ್ನರಸುವರೆಲ್ಲ ॥೩॥ ಮೂರನೆ ಮಗ ನಿವಕಿರಿಯುವನು। ಸಾರುತ ನಿನ್ನನೆ ಕರೆಯುವನು ॥ ೪ ॥ ಬಿಡುಬಿಡು ಬಿಂಕವ

ಶಿವಜಾಯೆ । ಕೊಡುಕೊಡು ಪಾಲ್ಕುಡಿಯನು ತಾಯೆ ॥ ೫ ॥ ಯಾತಕೆ ಪೊರೆಯಲು ಬಹುಚಿಂತೆ । ಪಾತಕೆಯನು ಪೇಳ್ಮ ತಿವಂತೆ । ಶಂಕರ ನೀರುಸ ದಯದಲಿ । ಶಂಕರದಾಸನ ಹೃದಯದಲಿ ॥ ೬ ॥

೫

ಇಡಬೇಕಿನ್ನಲ್ಲಿ ಭಕ್ತಿಯ ನಮ್ಮಮ್ಮ ತಾಯೆ । ಕೊಡಬೇಕು ನೀನೆ ಮುಕ್ತಿಯ ॥ಪ॥ ಬಿಡಬೇಕುಹಂಕಾರ। ಕೊಡಬೇಕು ಮಮಕಾರ। ನುಡಿಯಬೇಕು ನುಡಿದಂತೆ ನಡೆಬೇಕು । ಮುಂದಕೆ ಇಡಬೇಕಿನ್ನಲ್ಲಿ ॥ ೧ ॥ ತನುಮೋಪನನು ಬಿಟ್ಟು ಮನಕೊಂದುತಡೆಯಿಟ್ಟು । ಅನುಮಾನಿಸದೆ ನೀನೆ ಜನನಿಯೆಂದಳ ವಟ್ಟು । ಇಡಬೇಕಿನ್ನಲ್ಲಿ ॥೨॥ ವಾಸನೆಯಲ್ಲಸುಟ್ಟು ಪಾರಾಷ್ಟಕವು ಕೆಟ್ಟು । ಆಶೆಯಿಂ ಶಂಕರದಾಸತ್ವ ವಳವಳವಟ್ಟು ಇಡಬೇಕಿನ್ನಲ್ಲಿ ॥೩॥

೬

ಬೇಕಮ್ಮ ನೀನೆವಾಯೆ। ಅನ್ಯರಬೇಡಿ ಸಾಕಾಯಿತಮ್ಮ ತಾಯೇ। ಬೇಕು ನಿನ್ನಯ ಚರಣಕೃಪೆ। ನೀನೂಕಿದರೆ ಬ್ಯಾರೊಬ್ಬದೇವರ ಸಾಕುವರ ನಾಕಾಣೆ। ಜಗದೊಳಗೇಕಮೇವಾದ್ವಯಿನಜಾಯೇ । ಬೇಕಮ್ಮ ನೀನೇ ॥ ಪ ॥ ಮೂರರಿ ಜನ ಮೂರ್ತಿಗಳು । ನಿನ್ನೊಳು ಸೇರಿ ಬಾಳುವರಲ್ಲ ದೇವೀ । ಬೇರೆಯೆನ್ನುತ ಕರದ ಪುರುಷನ ಸೇರಿಸುವರಾರುಂಟು ಜಗದೊಳು । ಬೇಕಮ್ಮ ನೀನೇ ॥೧॥ ಶಕ್ತಿ ನೀನು ವ್ಯಕ್ತಳಣದರಿಂ। ವ್ಯಕ್ತಿಕೋಟಿಗಳಾಯ್ತು ಭಿನ್ನಿಸಿ। ಯುಕ್ತಿ ವಾದಗಳೇಕೆಮುಕ್ತಿಗೆ। ಭಕ್ತಿಸಿದ್ಧಿಯೆಬೇಕು ನರನಿಗೆ। ಬೇಕಮ್ಮ ನೀನೆ ॥ ೨ ॥ ದೇಶಗಳ ಸುತ್ತಿದರು । ಬಹುವಿಧವೇಶಗಳ ಧರಿಸಿದರು। ತೊಡಗಿದ ಕೋಶಗಳ ಕಳದುಳಿದು । ಶಂಕರದಾಸನಾದರು ದುಃಖಬಿಡದು । ಬೇಕಮ್ಮ ನೀನೇ ಕಾಯೆ ॥ ೩ ॥

॥ ಶಂಕರಾನಂದ ತತ್ವ ಸಂಪೂರ್ಣಂ ॥

---